# ಉಪವಾಸ ವ್ರತ

## ಫಿಕ್ಹುಸ್ಸುನ್ನಃ -3

ಡಾ. ಇಬ್ರಾಹೀಮ್ ಸಈದ್

ಪರಮದಯಾಮಯ ಕರುಣಾಳುವಾದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಖ್ಯಾತ ವಿದ್ವಾಂಸರಾದ ಮೌ| ಮುಹಮ್ಮದ್ ಆಸಿಮ್ ಅಲ್ ಹದ್ದಾದ್‌ರವರು ಉರ್ದು ಭಾಷೆಯಲ್ಲಿ ರಚಿಸಿದ 'ಫಿಕ್ಹುಸ್ಸುನ್ನಃ' ಎಂಬ ಗ್ರಂಥವನ್ನು ಆಧಾರವಾಗಿಟ್ಟು ಸನ್ಮಾರ್ಗ ವಾರಪತ್ರಿಕೆಯ ಸಂಪಾದಕರಾಗಿದ್ದ ದಿ| ಇಬ್ರಾಹೀಮ್ ಸಈದ್‌ರವರು ರಚಿಸಿದ ಕೃತಿಯಿದು. ಮೂಲಗ್ರಂಥದಲ್ಲಿ ಹದೀಸ್‌ನ ಆಧಾರದಲ್ಲಿ ವಿಷಯಗಳನ್ನು ಕ್ರೋಡೀಕರಿಸು ವುದರ ಜತೆಗೆ ನಾಲ್ಕೂ ಮದ್‌ಹಬ್‌ಗಳ ಇಮಾಮರ ಮತ್ತು ವಿದ್ವಾಂಸರ ಅಭಿಪ್ರಾಯ ಗಳನ್ನು ಮೂಲಗ್ರಂಥದಲ್ಲಿ ಅಳವಡಿಸಲಾಗಿತ್ತು.

ಆದರೆ ಈ ಕೃತಿಯಲ್ಲಿ ಭಾರತದ ಅದರಲ್ಲೂ ಕರ್ನಾಟಕದ ಮುಸ್ಲಿಮರು ಹೆಚ್ಚಾಗಿ ಶಾಫಿಈ ಮತ್ತು ಹನಫೀ ಕರ್ಮಶಾಸ್ತ್ರಗಳನ್ನು ಅವಲಂಬಿಸುವುದರಿಂದ ಕನ್ನಡದಲ್ಲಿ ರಚಿಸುವಾಗ ಕೇವಲ ಇವೆರಡೇ ಕರ್ಮಶಾಸ್ತ್ರಗಳಿಗೆ ಸಂಬಂಧಿಸಿದ ವಿಷಯಗಳನ್ನು ಸೇರಿಸಲಾಗಿದೆ.

'ಫಿಕ್ಹುಸ್ಸುನ್ನಃ' ಮೂಲಗ್ರಂಥದಿಂದ ನಮಾಝ್ ಮತ್ತು ಮಯ್ಯಿತ್ ಸಂಸ್ಕಾರಗಳ ವಿಧಿವಿಧಾನಗಳನ್ನು ಭಾಗ I ಮತ್ತು IIರಲ್ಲಿ ವಿವರಿಸಲಾಗಿದೆ. ಈ ಗ್ರಂಥ ಅಂದರೆ ಭಾಗ-3ರಲ್ಲಿ ಉಪವಾಸ ವ್ರತಕ್ಕೆ ಸಂಬಂಧಿಸಿದ ಸಮಗ್ರ ಮಾಹಿತಿಯನ್ನು ನೀಡಲಾಗಿದೆ. ಕನ್ನಡ ಜನತೆಗೆ ಇದರಿಂದ ಪ್ರಯೋಜನವಾಗಲಿ ಎಂದು ಹಾರೈಸುತ್ತೇವೆ.

ಶಾಂತಿ ಪ್ರಕಾಶನ

# ಮುನ್ನುಡಿ

ಕನ್ನಡ ಭಾಷೆಯಲ್ಲಿ ಇಸ್ಲಾಮಿನ ಆರಾಧನಾ ವಿಧಿಗಳನ್ನು ಸಮಗ್ರವಾಗಿ ವಿವರಿಸುವ ಒಂದು ಗ್ರಂಥದ ಅಗತ್ಯ ಹಲವು ಕಾಲಗಳಿಂದ ಇತ್ತು. 'ಫಿಖ್ಹುಸ್ಸುನ್ನಃ' ಎಂಬ ಈ ಇಸ್ಲಾಮೀ ಕರ್ಮಶಾಸ್ತ್ರ ಗ್ರಂಥದ ಮೂಲಕ ಆ ಅಗತ್ಯವನ್ನು ತಕ್ಕ ಮಟ್ಟಿಗೆ ಪೂರೈಸುವ ಪ್ರಯತ್ನ ಮಾಡಲಾಗಿದೆ. ಇದು ಪ್ರಸಿದ್ಧ ಇಸ್ಲಾಮೀ ವಿದ್ವಾಂಸ ಮೌ| ಮುಹಮ್ಮದ್ ಆಸಿಮ್ ಅಲ್ ಹದ್ದಾದ್ ಅವರು ಬರೆದ 'ಫಿಖ್ಹುಸ್ಸುನ್ನಃ' ಎಂಬ ಗ್ರಂಥವನ್ನು ಮೂಲಾಧಾರವಾಗಿಟ್ಟು ರಚಿಸಿದ ಒಂದು ಸ್ವತಂತ್ರ ಕೃತಿಯ ಮೂರನೆಯ ಭಾಗವಾಗಿದೆ.

ಕರ್ನಾಟಕದ ಎಲ್ಲ ಮುಸ್ಲಿಮರನ್ನು ದೃಷ್ಟಿಯಲ್ಲಿಟ್ಟು ಪ್ರತಿಯೊಂದು ವಿಧಿಗೂ ಹದೀಸ್‌ನ ಆಧಾರ ನೀಡುವುದರ ಜತೆಗೆ ಇಲ್ಲಿನ ಪ್ರಮುಖ ಕರ್ಮಶಾಸ್ತ್ರ ಪದ್ಧತಿಗಳಾದ ಹನಫಿ, ಶಾಫಿಈ ಕರ್ಮಶಾಸ್ತ್ರ ಗ್ರಂಥಗಳಲ್ಲಿರುವ ವಿಧಿಗಳನ್ನೂ ವಿವರಿಸಲಾಗಿದೆ. ಈ ರೀತಿ ಈ ಗ್ರಂಥವು ಹನಫೀ, ಶಾಫಿಈ ಕರ್ಮಶಾಸ್ತ್ರಗಳನ್ನನುಸರಿಸುವವರಿಗೂ ಅಹ್ಲುಲ್ ಹದೀಸ್‌ಗಳಿಗೂ ಏಕಪ್ರಕಾರ ಉಪಯುಕ್ತವಾಗಿದೆ.

ಯಾವುದೇ ಕರ್ಮಶಾಸ್ತ್ರ ಪದ್ಧತಿಯನ್ನು ಅನುಸರಿಸುವವರು ಇತರರ ದೃಷ್ಟಿಕೋನಗಳನ್ನೂ ಅರಿಯುವ ಮತ್ತು ಆ ಬಗ್ಗೆ ಇರುವ ತಪ್ಪುಕಲ್ಪನೆಗಳನ್ನು ನೀಗಿಸಿಕೊಳ್ಳುವ ಅವಕಾಶವೂ ಈ ಗ್ರಂಥದ ಮೂಲಕ ಲಭಿಸುತ್ತದೆ.

ಸಾಮಾನ್ಯ ಕರ್ಮಶಾಸ್ತ್ರ ಪುಸ್ತಕಗಳಲ್ಲಿರುವಂತೆ ಕೇವಲ ವಿಧಿಗಳನ್ನು ಮಾತ್ರ ವಿವರಿಸುತ್ತಾ ಹೋಗದೆ ಈ ಪುಸ್ತಕದಲ್ಲಿ ಹೆಚ್ಚಿನ ವಿಧಿಗಳನ್ನು ಹದೀಸ್‌ಗಳ ಆಧಾರದಲ್ಲಿ ನೀಡಲಾಗಿದೆ. ಅಧಿಕೃತ ಗ್ರಂಥಗಳಿಂದ ಹದೀಸ್‌ಗಳನ್ನು ಉದ್ಧರಿಸುವ ಮೂಲಕ ಪ್ರವಾದಿ ಮುಹಮ್ಮದ್(ಸ) ಅವರ ಅನುಸರಣೆಯ ಸ್ಫೂರ್ತಿ ಬೆಳೆಸಲು ಪ್ರಯತ್ನಿಸಲಾಗಿದೆ. ಅದುವೇ ನಮ್ಮಲ್ಲಿ ಕರ್ಮಶಾಸ್ತ್ರ ವಿಧಿಗಳ ಮೂಲಾಧಾರವಾಗಿದೆ. ಇದು ಅದರ ಮೂರನೆಯ ಭಾಗವಾಗಿದ್ದು 'ಉಪವಾಸ ವ್ರತ'ದ ವಿಧಿ-ವಿಧಾನಗಳ ವಿವರಣೆಯನ್ನು ಒಳಗೊಂಡಿದೆ. ಮುಂದಿನ ಭಾಗಗಳಲ್ಲಿ 'ಝಕಾತ್' ಮತ್ತು 'ಹಜ್ಜ್'ನ ಕುರಿತ ವಿವರಗಳಿರುವುವು. ಗ್ರಂಥದ ಮೊದಲನೆಯ ಭಾಗದಲ್ಲಿ 'ನಮಾಝ್' ಮತ್ತು ಎರಡನೆಯ ಭಾಗದಲ್ಲಿ 'ಮಯ್ಯಿತ್ ಸಂಸ್ಕಾರ'ದ ಕುರಿತು ವಿವರಣೆಗಳಿವೆ.

ಈ ಗ್ರಂಥದಲ್ಲಿ ಪ್ರತಿಯೊಬ್ಬರೂ ಕಂಠಪಾಠ ಮಾಡಬೇಕಾದ ಆಯತ್, ದಿಕ್ರ್, ದುಆ, ಸಲಾತ್ ಇತ್ಯಾದಿಗಳನ್ನು ಅರಬಿ ಲಿಪಿಯಲ್ಲಿ ನೀಡುವುದರ ಜತೆಗೆ ಅದರ ಕನ್ನಡ ಲಿಪಿಯಂತರವನ್ನೂ ನೀಡಲಾಗಿದೆ. ಅರಬಿ ಲಿಪಿ ಗೊತ್ತಿಲ್ಲದವರು ಅದನ್ನು ಕಲಿಯುವ

ಪ್ರಯತ್ನ ಮಾಡುವುದರ ಜತೆಗೆ ಅರಬಿ ಬಲ್ಲವರಿಂದ ಸರಿಯಾದ ಉಚ್ಚಾರವನ್ನು ಕಲಿತು ಅದನ್ನು ಕಂಠಪಾಠ ಮಾಡಿಕೊಳ್ಳಬಹುದು.

'ಫಿಕ್ಹುಸ್ಸುನ್ನಃ' ಎಂಬ ಮೂಲ ಗ್ರಂಥದ ರಚನೆಯಲ್ಲಿ 'ಸಿಹಾಹುಸ್ಸಿತ್ತ' ಎಂಬ ಅಧಿಕೃತ ಆರು ಹದೀಸ್‌ಗಳಲ್ಲದೆ ಇತರ ಹಲವು ಹದೀಸ್ ಗ್ರಂಥಗಳು ಮತ್ತು 'ನೈಲುಲ್ ಔತಾರ್', 'ಹಿದಾಯತುಲ್ ಮುಜ್ತಹಿದ್', 'ಅಲ್ ಫಿಕ್ಹು ಅಲಾ ಮದಾಹಿಬಿಲ್ ಅರ್‌ಬಅ' ಮುಂತಾದ ಅನೇಕ ಕರ್ಮಶಾಸ್ತ್ರ ಗ್ರಂಥಗಳಿಂದ ಪ್ರಯೋಜನ ಪಡೆಯಲಾಗಿದೆ. ಅಲ್ಲಾಹನು ಇದರ ಪ್ರತಿಫಲವನ್ನು ಆ ಎಲ್ಲ ಹದೀಸ್ ಸಂಗ್ರಹಕಾರರಿಗೂ ಕರ್ಮಶಾಸ್ತ್ರಜ್ಞರಿಗೂ ವಿಶೇಷವಾಗಿ 'ಫಿಕ್ಹುಸ್ಸುನ್ನಃ'ದ ಗ್ರಂಥಕರ್ತರಿಗೂ ನೀಡಿ ಅನುಗ್ರಹಿಸಲಿ. ಆಮೀನ್.

ಮಂಗಳೂರು
29-07-1997

ವಸ್ಸಲಾಮ್
ಇಬ್ರಾಹೀಮ್ ಸಈದ್

# ಅನುಕ್ರಮಣಿಕೆ

# ಉಪವಾಸ ವ್ರತದ ಮಹತ್ವ

ಉಪವಾಸ ವ್ರತಕ್ಕೆ ಪವಿತ್ರ ಕುರ್‌ಆನ್ ಮತ್ತು ಹದೀಸ್‌ಗಳಲ್ಲಿ 'ಅಸ್ಸೌಮ್' ಅಥವಾ 'ಅಸ್ಸಿಯಾಮ್' ಎಂಬ ಪದಗಳನ್ನು ಬಳಸಲಾಗಿದೆ. ಅದರ ಅರ್ಥ ಯಾವುದಾದರೂ ವಸ್ತುವಿನಿಂದ ತನ್ನನ್ನು ತಾನೇ ತಡೆದು ನಿಲ್ಲಿಸುವುದು. ಹ.ಮರ್ಯಮ್(ಅ) ಈ ರೀತಿ ಹೇಳಿರುವರೆಂದು ಪವಿತ್ರ ಕುರ್‌ಆನಿನಲ್ಲಿ ಉಲ್ಲೇಖಿಸಲಾಗಿದೆ.

'ಇನ್ನೀ ನದರ್ತು ಲಿರ್ರಹ್ಮಾನಿ ಸೌಮಾ' (ನಾನು ಪರಮ ದಯಾಮಯನಿಗಾಗಿ ತಡೆದಿರುವ ಅರ್ಥಾತ್ ಮಾತಾಡದಿರುವ ಹರಕೆ ಹೊತ್ತಿರುವೆನು). ಶರೀಅತ್‌ನಲ್ಲಿ 'ಸೌಮ್' ಮತ್ತು 'ಸಿಯಾಮ್' ಎಂದರೆ ಒಂದು ನಿರ್ದಿಷ್ಟ ಸಮಯದಲ್ಲಿ, ನಿರ್ದಿಷ್ಟ ವಸ್ತುಗಳಿಂದ, ನಿರ್ದಿಷ್ಟ ನಿಯಮಗಳ ಪ್ರಕಾರ ತಡೆದು ನಿಲ್ಲುವುದಾಗಿದೆ.

[ಇಮಾಮ್ ನವವೀ, ಇಬ್ನು ಹಜರ್, ನೈಲುಲ್ ಔತಾರ್, ಭಾಗ - 4, ಪುಟ: 159]

ಉಪವಾಸ ವ್ರತ ಮತ್ತು ಉಪವಾಸಿಗರ ಮಹತ್ವವನ್ನು ಕುರಿತು ಪ್ರವಾದಿವರ್ಯ ರಿಂದ(ಸ) ಅನೇಕ ಹದೀಸ್‌ಗಳು ವರದಿಯಾಗಿವೆ. ಆ ಪೈಕಿ ನಾಲ್ಕು ಹದೀಸ್‌ಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.

1. ಪ್ರವಾದಿ(ಸ) ಹೇಳಿದರು: "ಸ್ವರ್ಗಕ್ಕೆ ಒಂದು ಬಾಗಿಲಿದೆ. ಅದರ ಹೆಸರು 'ರಯ್ಯಾನ್.' ಕಿಯಾಮತ್‌ನ ದಿನ 'ಉಪವಾಸಿಗರು ಎಲ್ಲಿದ್ದಾರೆ?' ಎಂದು ಘೋಷಿಸ ಲಾಗುವುದು ಕೊನೆಯ ಉಪವಾಸಿಗನು ಪ್ರವೇಶಿಸಿದ ಬಳಿಕ ಈ ಬಾಗಿಲನ್ನು ಮುಚ್ಚಲಾಗುವುದು."

[ವರದಿ: ಹ.ಸಹ್ಲ್ ಬಿನ್ ಸಅದ್(ರ) - ಬುಖಾರಿ, ಮುಸ್ಲಿಮ್]

2. ಪ್ರವಾದಿ(ಸ) ಹೇಳಿದರು: "ಯಾವ ದಾಸನು ಅಲ್ಲಾಹನ ಮಾರ್ಗದಲ್ಲಿ ಅಲ್ಲಾಹನಿಗಾಗಿ ಉಪವಾಸ ವ್ರತ ಆಚರಿಸುತ್ತಾನೋ ಅಲ್ಲಾಹನು ಅದರ ಮೂಲಕ ಅವನ ಮುಖವನ್ನು ನರಕದಿಂದ ಎಪ್ಪತ್ತು ಖಲೀಫ್ (210 ಮೈಲಿ) ದೂರಗೊಳಿಸುತ್ತಾನೆ." [ವರದಿ: ಹ. ಅಬೂಸಈದ್(ರ) - ಬುಖಾರಿ, ಮುಸ್ಲಿಮ್, ತಿರ್ಮಿದಿ, ನಸಾಈ, ಅಹ್ಮದ್, ಇಬ್ನುಮಾಜಃ]

3. ಪ್ರವಾದಿ(ಸ) ಹೇಳಿದರು: "ಅಲ್ಲಾಹನು ಹೇಳುತ್ತಾನೆ: ಆದಮನ ಸಂತತಿಯ ಪ್ರತಿಯೊಂದು ಕರ್ಮವು ಅವನ ಸ್ವಂತಕ್ಕಾಗಿದೆ. ಆದರೆ ಉಪವಾಸ ವ್ರತದ ಹೊರತು. ಏಕೆಂದರೆ ಅದು ನನಗಾಗಿದೆ. ನಾನೇ ಅದಕ್ಕೆ ಪ್ರತಿಫಲ ನೀಡುವೆನು." ಉಪವಾಸ ವ್ರತವು

ಗುರಾಣಿಯಾಗಿದೆ. ಆದ್ದರಿಂದ ನಿಮ್ಮ ಪೈಕಿ ಯಾರಾದರೂ ಉಪವಾಸ ವ್ರತ ಆಚರಿಸಿದರೆ ಅವನು ಕೆಟ್ಟ ಮಾತು ಆಡಬಾರದು. ಗುಲ್ಲು- ಗದ್ದಲ ಮಾಡಬಾರದು ಮತ್ತು ಅಜ್ಞಾನದ ಮಾತು ಆಡಬಾರದು. ಯಾರಾದರೂ ಅವನಲ್ಲಿ ಕೆಟ್ಟ ಮಾತು ಆಡಿದರೆ ಅಥವಾ ಜಗಳಕ್ಕಿಳಿದರೆ "ನಾನು ಉಪವಾಸ ವ್ರತ ಆಚರಿಸುತ್ತಿದ್ದೇನೆ" ಎಂದು ಎರಡು ಸಲ ಹೇಳಿ ಬಿಡಬೇಕು. ಮುಹಮ್ಮದ್‌ನ(ಸ) ಪ್ರಾಣವು ಯಾರ ಕೈಯಲ್ಲಿದೆಯೋ ಆ ಮಹಾಮಹಿಮನ ಆಣೆ! ಉಪವಾಸಿಗನ ಬಾಯಿಯ ವಾಸನೆಯು ಕಿಯಾಮತ್ ದಿನದಂದು ಅಲ್ಲಾಹನ ಬಳಿ ಕಸ್ತೂರಿಯ ವಾಸನೆಗಿಂತಲೂ ಹೆಚ್ಚು ಸುಗಂಧಭರಿತವಾಗಿರುವುದು. ಉಪವಾಸಿಗನಿಗೆ ಎರಡು ಸಂತೋಷಗಳಿವೆ. ಮೊದಲನೆಯದು ಅವನು ತನ್ನ ಉಪವಾಸ ವ್ರತವನ್ನು ಮುಗಿಸುವ ವೇಳೆ; ಎರಡನೆಯದು ಅವನು ಉಪವಾಸದ ಸ್ಥಿತಿಯಲ್ಲಿ ತನ್ನ ಪ್ರಭುವನ್ನು ಭೇಟಿಯಾಗುವಾಗ. ಅಲ್ಲಾಹನು ಅವನಿಂದ ಸಂತುಷ್ಟನಾಗುವನು.

[ವರದಿ: ಹ. ಅಬೂಹುರೈರಾ(ರ) - ಅಹ್ಮದ್, ಮುಸ್ಲಿಮ್, ನಸಾಈ]

ಇದೇ ಹದೀಸ್ ಬುಖಾರಿ ಮತ್ತು ಅಬೂದಾವೂದ್‌ಗಳಲ್ಲೂ ಬಂದಿದೆ. ಅದರಲ್ಲಿ ಈ ಪದಗಳಿವೆ. (ಅಲ್ಲಾಹನು ಹೇಳುತ್ತಾನೆ:) ಅವನು ತನ್ನ ಅನ್ನ - ಪಾನೀಯ ಮತ್ತು ಕಾಮಬಯಕೆಯ ಈಡೇರಿಕೆಯನ್ನು ನನಗಾಗಿ ತೊರೆಯುತ್ತಾನೆ. ಆದ್ದರಿಂದ ನಾನೇ ಅದರ ಪ್ರತಿಫಲ ನೀಡುವೆನು. ಒಂದು ಪುಣ್ಯದ ಪ್ರತಿಫಲವು ಹತ್ತು ಪಟ್ಟಾಗಿದೆ.

4. ಪ್ರವಾದಿ(ಸ) ಹೇಳಿದರು: ಉಪವಾಸ ವ್ರತ ಮತ್ತು ಕುರ್‌ಆನ್ ಕಿಯಾಮತ್‌ನ ದಿನ ಅಲ್ಲಾಹನ ಮುಂದೆ ಶಿಫಾರಸು ಮಾಡುವುವು. ಉಪವಾಸವ್ರತ ಹೇಳುವುದು: ನಾನು ಹಗಲಿನ ವೇಳೆ ಇವನನ್ನು ಊಟ ಮಾಡುವುದರಿಂದ ಮತ್ತು ತನ್ನ ದೈಹಿಕ ಬಯಕೆಯನ್ನು ತೀರಿಸುವುದರಿಂದ ತಡೆದಿರಿಸಿದೆ. ಆದ್ದರಿಂದ ಇವನ ಪರವಾಗಿ ನನ್ನ ಶಿಫಾರಸನ್ನು ಸ್ವೀಕರಿಸು.

[ವರದಿ: ಹ. ಅಬ್ದುಲ್ಲಾ ಬಿನ್ ಅಮ್ರ್(ರ) - ಅಹ್ಮದ್]

## ಉಪವಾಸ ವ್ರತದ ವಿಧಗಳು

ನಾಲ್ಕು ವಿಧದ ಉಪವಾಸ ವ್ರತಗಳಿವೆ.

1. ಫರ್ಳ್(ಕಡ್ಡಾಯ) (ಹನಫೀ ಕರ್ಮಶಾಸ್ತ್ರದ ಪ್ರಕಾರ 'ವಾಜಿಬ್' ಎಂಬ ಒಂದು ವಿಧವೂ ಇದೆ)
2. ನಫಿಲ್ ಅಥವಾ ಮುಸ್ತಹಬ್(ಐಚ್ಛಿಕ)
3. ಮಕ್ರೂಹ್(ಅನಪೇಕ್ಷಿತ)
4. ಹರಾಮ್ (ನಿಷಿದ್ಧ)

## ಕಡ್ಡಾಯ ಉಪವಾಸ ವ್ರತ

ಕಡ್ಡಾಯ ಉಪವಾಸ ವ್ರತದ ಮೂರು ವಿಧಗಳಿವೆ:

1. ರಮಝಾನ್ ತಿಂಗಳ ಉಪವಾಸ ವ್ರತ.
2. ಪ್ರಾಯಶ್ಚಿತದ ಉಪವಾಸ ವ್ರತ.
3. ಹರಕೆಯ ಉಪವಾಸ ವ್ರತ.

# ರಮಝಾನ್ ತಿಂಗಳ ಉಪವಾಸ ವ್ರತ

## 1. ವಿಧಿ

ರಮಝಾನ್ ತಿಂಗಳ ಉಪವಾಸ ವ್ರತವು ಕುರ್‌ಆನ್, ಸುನ್ನತ್ ಮತ್ತು ಸಮುದಾಯದ ಒಮ್ಮತಾಭಿಪ್ರಾಯದ ಪ್ರಕಾರ ಕಡ್ಡಾಯವಾಗಿದೆ.

[ಹಿದಾಯತುಲ್ ಮುಜ್ತಹಿದ್ ಭಾಗ - 1, ಪುಟ: 193]

ಅಲ್ಲಾಹನು ಈ ರೀತಿ ಆದೇಶಿಸಿರುವನು:

"ಸತ್ಯವಿಶ್ವಾಸಿಗಳೇ! ನಿಮ್ಮ ಪೂರ್ವಜರ ಮೇಲೆ ಕಡ್ಡಾಯಗೊಳಿಸಿದಂತೆ ನಿಮ್ಮ ಮೇಲೂ ಉಪವಾಸ ವ್ರತವನ್ನು ಕಡ್ಡಾಯಗೊಳಿಸಲಾಗಿದೆ.......... ರಮಝಾನ್ ಕುರ್‌ಆನ್ ಅವತೀರ್ಣಗೊಂಡ ತಿಂಗಳಾಗಿದೆ. ಅದು ಮಾನವಕುಲಕ್ಕೆ ಮಾರ್ಗದರ್ಶಿಯಾಗಿದ್ದು ಸನ್ಮಾರ್ಗದರ್ಶನ ಮಾಡುವ ಮತ್ತು ಸತ್ಯಾಸತ್ಯಗಳ ವ್ಯತ್ಯಾಸವನ್ನು ವ್ಯಕ್ತಪಡಿಸುವ ಸ್ಪಷ್ಟವಾದ ಬೋಧನೆಗಳನ್ನು ಒಳಗೊಂಡಿದೆ. ಆದ್ದರಿಂದ ನಿಮ್ಮ ಪೈಕಿ ಆ ತಿಂಗಳನ್ನು ಪಡೆದವನು ಅದರಲ್ಲಿ ಉಪವಾಸ ವ್ರತ ಆಚರಿಸಬೇಕು." (ಪವಿತ್ರ ಕುರ್‌ಆನ್, 2:183-185)

ಪ್ರವಾದಿ(ಸ) ಈ ರೀತಿ ಆದೇಶಿಸಿರುವರು,

ಇಸ್ಲಾಮ್‌ನ ಬುನಾದಿಯು ಐದು ವಿಷಯಗಳ ಮೇಲಿದೆ:

1. ಅಲ್ಲಾಹನಲ್ಲದೆ ಅನ್ಯ ಆರಾಧ್ಯನಿಲ್ಲ ಮತ್ತು ಮುಹಮ್ಮದ್(ಸ) ಅಲ್ಲಾಹನ ಸಂದೇಶವಾಹಕರಾಗಿದ್ದಾರೆಂದು ಸಾಕ್ಷ್ಯ ಹೇಳುವುದು.
2. ನಮಾಝ್ ಸಂಸ್ಥಾಪಿಸುವುದು.
3. ಝಕಾತ್ ನೀಡುವುದು.
4. ರಮಝಾನ್ ತಿಂಗಳ ಉಪವಾಸ ವ್ರತ ಆಚರಿಸುವುದು ಮತ್ತು
5. ಸಾಮರ್ಥ್ಯವಿರುವವನು ಅಲ್ಲಾಹನ ಭವನದ ಹಜ್ಜ್ ಮಾಡುವುದು.

## 2. ರಮಝಾನ್ ತಿಂಗಳ ಮಹತ್ವ

ಒಮ್ಮೆ ರಮಝಾನ್ ತಿಂಗಳು ಬಂದಾಗ ಪ್ರವಾದಿ(ಸ) ಹೇಳಿದರು:

"ನಿಮ್ಮ ಮೇಲೆ ಒಂದು ಮಂಗಳದಾಯಕ ತಿಂಗಳು ಆವರಿಸಿದೆ. ಅದರಲ್ಲಿ ಉಪವಾಸ ವ್ರತವನ್ನು ಅಲ್ಲಾಹನು ನಿಮ್ಮ ಮೇಲೆ ಕಡ್ಡಾಯಗೊಳಿಸಿರುವನು. ಆ ತಿಂಗಳಲ್ಲಿ ಸ್ವರ್ಗದ

ದ್ವಾರಗಳು ತೆರೆಯಲ್ಪಡುತ್ತವೆ. ನರಕದ ಬಾಗಿಲುಗಳು ಮುಚ್ಚಲ್ಪಡುತ್ತವೆ. ಶೈತಾನನನ್ನು ಬಂಧಿಸಲಾಗುತ್ತದೆ. ಅದರಲ್ಲಿ ಒಂದು ರಾತ್ರಿಯು ಸಾವಿರ ತಿಂಗಳುಗಳ ರಾತ್ರಿಗಳಿಗಿಂತ ಶ್ರೇಷ್ಠವಾಗಿದೆ. ಯಾರು ಅದರ ಒಳಿತಿನಿಂದ ವಂಚಿತನಾದನೋ ಅವನು ವಂಚಿತನಾದಂತೆಯೇ ಸರಿ." [ವರದಿ: ಹ. ಅಬೂಹುರ್ರೈರಾ(ರ) - ಅಹ್ಮದ್, ನಸಾಈ, ಬೈಹಕಿ]

ಪ್ರವಾದಿ(ಸ) ಈ ರೀತಿ ಹೇಳಿರುವರು: "ಯಾರು ಅಲ್ಲಾಹನ ಮೇಲೆ ವಿಶ್ವಾಸವಿಟ್ಟು ಅದರ ಪ್ರತಿಫಲವನ್ನು ಬಯಸುತ್ತಾ ರಮಝಾನ್ ತಿಂಗಳ ಉಪವಾಸ ವ್ರತ ಆಚರಿಸಿದನೋ ಅವನ ಹಿಂದಿನ ಎಲ್ಲ ಪಾಪಗಳೂ ಕ್ಷಮಿಸಲ್ಪಟ್ಟುವು."

[ವರದಿ: ಹ. ಅಬೂಹುರ್ರೈರಾ(ರ) - ಅಹ್ಮದ್, ಅಬೂದಾವೂದ್, ಇಬ್ನುಮಾಜಃ]

## 3. ರಮಝಾನ್ ತಿಂಗಳ ದಿನಗಳು

ಚಾಂದ್ರಮಾನ ತಿಂಗಳು 29 ದಿವಸಕ್ಕಿಂತ ಕಡಿಮೆ ಮತ್ತು 30 ದಿನಕ್ಕಿಂತ ಹೆಚ್ಚಿರುವುದಿಲ್ಲವೆಂಬುದು ಸರ್ವಸಮ್ಮತ ವಿಷಯ.

[ಹಿದಾಯತುಲ್ ಮುಜ್ತಹಿದ್ ಭಾಗ - 1, ಪುಟ: 194]

ಪ್ರವಾದಿ(ಸ) ಈ ರೀತಿ ಹೇಳಿರುವರು:

"ನಾವು ಒಂದು ನಿರಕ್ಷರಿ ಜನಾಂಗದವರು. ತಿಂಗಳು ಹೀಗೆ ಮತ್ತು ಹೀಗೆ ಇರುತ್ತದೆ" ಎನ್ನುತ್ತಾ ಹದೀಸ್ ಉಲ್ಲೇಖಕಾರರಾದ ಇಬ್ನು ಹರಬ್(ರ) ತಮ್ಮ ಬೆರಳುಗಳಿಂದ 29 ಮತ್ತು 30 ಸಂಖ್ಯೆ ಮಾಡಿ ತೋರಿಸಿದರು." [ವರದಿ: ಇಬ್ನು ಉಮರ್(ರ) - ಬುಖಾರಿ, ಮುಸ್ಲಿಮ್, ಅಬೂದಾವೂದ್, ಇಬ್ನುಮಾಜಃ]

## 4. ರಮಝಾನ್ ತಿಂಗಳ ಆರಂಭ ಮತ್ತು ಅಂತ್ಯ

ರಮಝಾನ್ ತಿಂಗಳ ಆರಂಭ ಮತ್ತು ಅಂತ್ಯವನ್ನು ಚಂದ್ರದರ್ಶನದ ಆಧಾರದಲ್ಲಿ ಮಾಡಲಾಗುವುದೆಂಬುದು ಒಂದು ಸರ್ವಸಮ್ಮತ ವಿಧಿ.

[ಹಿದಾಯತುಲ್ ಮುಜ್ತಹಿದ್, ಭಾಗ - 1, ಪುಟ: 194]

ಶಅಬಾನ್ ತಿಂಗಳ 29ರಂದು ಸಂಜೆ ಚಂದ್ರದರ್ಶನವಾದರೆ ಮುಂದಿನ ದಿನ ರಮಝಾನ್ ತಿಂಗಳ ಪ್ರಥಮ ದಿನವಾಗಿರುವುದು. ಅಂದು ಉಪವಾಸ ವ್ರತ ಆಚರಿಸಲಾಗುವುದು. ಅನ್ಯಥಾ 30 ದಿನಗಳನ್ನು ಪೂರ್ಣಗೊಳಿಸಿ ಮುಂದಿನ ದಿನ ಉಪವಾಸ ವ್ರತ ಆಚರಿಸಲಾಗುವುದು. ಶಅಬಾನ್ 30ರ ಸಂಜೆ ಬಿದಿಗೆ ಚಂದ್ರ ಗೋಚರಿಸಿದರೂ ಗೋಚರಿಸದಿದ್ದರೂ ಮುಂದಿನ ದಿನ ರಮಝಾನ್ ತಿಂಗಳ ಪ್ರಥಮ ದಿನವೆಂದು ಪರಿಗಣಿಸಲಾಗುವುದು.

ಶಅಬಾನ್ 29ರಂದು ಸಂಜೆ ಆಕಾಶದಲ್ಲಿ ಮೋಡವಿದ್ದು ಚಂದ್ರ ದರ್ಶನ ವಾಗದಿದ್ದರೆ ಮುಂದಿನ ದಿನ ಉಪವಾಸವ್ರತ ಆಚರಿಸಲಾಗದು. 30 ದಿನಗಳನ್ನು ಪೂರ್ಣ ಗೊಳಿಸಿ ಅದರ ಮುಂದಿನ ದಿನವೇ ಉಪವಾಸ ವ್ರತ ಆಚರಿಸಲಾಗುವುದು. ಅದೇ ರೀತಿ ರಮಝಾನ್

29ರಂದು ಸಂಜೆ ಚಂದ್ರದರ್ಶನವಾದರೆ ಮರುದಿನ ಶವ್ವಾಲ್ ತಿಂಗಳ ಒಂದನೇ ತಾರೀಕು ಆಗಿರುವುದು. ಆ ದಿನ ಚಂದ್ರೋದಯವಾಗದಿದ್ದರೆ ಅಥವಾ ಮೋಡದ ಕಾರಣ ಚಂದ್ರ ಗೋಚರಿಸದಿದ್ದರೆ ರಮಝಾನ್ ತಿಂಗಳ 30 ದಿನ ಪೂರ್ಣ ಗೊಳಿಸಿ ಮುಂದಿನ ದಿನ ಹಬ್ಬ ಆಚರಿಸಲಾಗುವುದು. ರಮಝಾನ್ 30ರ ಸಂಜೆ ಚಂದ್ರದರ್ಶನವಾದರೂ ಆಗದಿದ್ದರೂ ಸರಿಯೇ.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ನೀವು ಚಂದ್ರನನ್ನು ಕಂಡಾಗ ಉಪವಾಸ ವ್ರತ ಆರಂಭಿಸಿರಿ. ಚಂದ್ರನನ್ನು ಕಂಡಾಗ ಉಪವಾಸ ವ್ರತ ಮುಗಿಸಿರಿ. ಒಂದು ವೇಳೆ ಮೋಡವಿದ್ದರೆ ಅದರ ಎಣಿಕೆ ಪೂರ್ತಿಗೊಳಿಸಿರಿ." [ವರದಿ: ಹ.ಇಬ್ನು ಉಮರ್(ರ) - ಬುಖಾರಿ, ಮುಸ್ಲಿಮ್, ನಸಾಈ, ಇಬ್ನುಮಾಜಃ]

ಇನ್ನೊಂದು ವರದಿ ಪ್ರಕಾರ "ಮೋಡವಿದ್ದರೆ 30 ದಿನಗಳ ಎಣಿಕೆ ಪೂರ್ತಿ ಗೊಳಿಸಿರಿ." [ಬುಖಾರಿ]

ಮತ್ತೊಂದು ವರದಿ ಪ್ರಕಾರ "ಮೋಡವಿದ್ದರೆ 30 ದಿನಗಳ ಲೆಕ್ಕ ಮಾಡಿರಿ." [ಮುಸ್ಲಿಮ್]

ಪ್ರವಾದಿ(ಸ) ಈ ರೀತಿ ಹೇಳಿರುವರು:

ಅದನ್ನು ನೋಡಿ ಉಪವಾಸ ಆಚರಿಸಿರಿ, ಅದನ್ನು ನೋಡಿ ಉಪವಾಸ ವ್ರತ ಮುಗಿಸಿರಿ. ಒಂದು ವೇಳೆ ಮೋಡವಿದ್ದರೆ ಶಅಬಾನ್‌ನ 30 ದಿನಗಳನ್ನು ಪೂರ್ತಿಗೊಳಿಸಿ. [ವರದಿ: ಹ. ಅಬೂ ಹುರೈರಾ(ರ) -ಬುಖಾರಿ]

ಇಮಾಮ್ ಅಬೂಹನೀಫಾ, ಇಮಾಮ್ ಶಾಫಿಈ(ರ) ಸಹಿತ ಹೆಚ್ಚಿನ ಕರ್ಮ ಶಾಸ್ತ್ರಜ್ಞರ ಮತ್ತು ಹದೀಸ್ ಸಂಗ್ರಹಕಾರರ ಅಭಿಪ್ರಾಯ ಇದುವೇ ಆಗಿದೆ.

## 5. ರಮಝಾನ್ ಮತ್ತು ಈದ್‌ನ ಚಂದ್ರದರ್ಶನಕ್ಕೆ ಕನಿಷ್ಠ ಸಾಕ್ಷಿ

ರಮಝಾನ್ ತಿಂಗಳ ಚಂದ್ರನನ್ನು ಒಬ್ಬ ನಂಬಲರ್ಹ ಮುಸ್ಲಿಮನು ಕಂಡರೂ ಆತನ ಸಾಕ್ಷಿಯನ್ನು ಸ್ವೀಕರಿಸಿ ಮುಂದಿನ ದಿನ ಉಪವಾಸ ವ್ರತ ಆಚರಿಸಲಾಗುವುದು.

"ಜನರು ಚಂದ್ರದರ್ಶನಕ್ಕೆ ಪ್ರಯತ್ನಿಸಿದರು (ಆದರೆ ಅವರಿಗೆ ಅದು ಗೋಚರಿಸಲಿಲ್ಲ). ನಾನು (ಚಂದ್ರನನ್ನು ಕಂಡು) ಪ್ರವಾದಿವರ್ಯರಲ್ಲಿ(ಸ) 'ನನಗೆ ಚಂದ್ರನ ದರ್ಶನವಾಗಿದೆ' ಎಂದು ಹೇಳಿದೆ. ಅದರಂತೆ ಪ್ರವಾದಿ(ಸ) ಸ್ವತಃ ಉಪವಾಸ ಆರಂಭಿಸಿದರು ಮತ್ತು ಜನರಿಗೆ ಉಪವಾಸ ಆರಂಭಿಸುವಂತೆ ಆದೇಶಿಸಿದರು." [ವರದಿ: ಹ. ಅಬ್ದುಲ್ಲಾ ಬಿನ್ ಉಮರ್(ರ) - ಅಬೂದಾವೂದ್, ಹಾಕಿಮ್, ಇಬ್ನು ಹಿಬ್ಬಾನ್]

"ಒಬ್ಬ ಗ್ರಾಮೀಣ ಅರಬನು ಪ್ರವಾದಿ(ಸ) ಅವರ ಬಳಿಗೆ ಬಂದು 'ನಾನು ಚಂದ್ರನನ್ನು ಕಂಡಿದ್ದೇನೆ' ಎಂದನು. ಆಗ ಪ್ರವಾದಿ(ಸ) ಅವನಲ್ಲಿ ಈ ರೀತಿ ವಿಚಾರಿ ಸಿದರು. 'ಅಲ್ಲಾಹನ

ಹೊರತು ಅನ್ಯ ಆರಾಧ್ಯನಿಲ್ಲವೆಂದು ನೀವು ಸಾಕ್ಷ್ಯ ವಹಿಸುತ್ತೀರಾ?' ಆಗ ಆ ವ್ಯಕ್ತಿ ಹೌದೆಂದರು. ಪ್ರವಾದಿ(ಸ) ಮತ್ತೆ ವಿಚಾರಿಸಿದರು. 'ಮುಹಮ್ಮದ್(ಸ) ಅಲ್ಲಾಹನ ಸಂದೇಶವಾಹಕರಾಗಿರುವರೆಂದು ನೀವು ಸಾಕ್ಷ್ಯ ವಹಿಸುತ್ತೀರಾ?' ಆ ವ್ಯಕ್ತಿ ಹೌದೆಂದರು. ಆಗ ಪ್ರವಾದಿ(ಸ) ಹೇಳಿದರು: ಬಿಲಾಲ್‌ರೇ(ರ)! ನಾಳೆ ಉಪವಾಸ ಆಚರಿಸಲು ಜನರಲ್ಲಿ ಘೋಷಣೆ ಮಾಡಿರಿ." [ವರದಿ: ಹ. ಇಬ್ನು ಅಬ್ಬಾಸ್(ರ) - ಅಬೂದಾವೂದ್, ತಿರ್ಮಿದಿ]

ಇದುವೇ ಮುಂಗಾಮಿಗಳಾದ ಹೆಚ್ಚಿನ ವಿದ್ವಾಂಸರ ಅಭಿಮತ. ಇಮಾಮ್ ಅಬೂ ಹನೀಫಾ(ರ) ಮತ್ತು ಇಮಾಮ್ ಶಾಫಿಈ(ರ) ಅವರ ಅಭಿಪ್ರಾಯವೂ ಇದುವೇ ಆಗಿದೆ. ಒಂದು ವರದಿ ಪ್ರಕಾರ ಇಮಾಮ್ ಶಾಫಿಈ(ರ) ಅವರ ಅಭಿಪ್ರಾಯದಂತೆ ರಮಝಾನ್‌ನ ಚಂದ್ರದರ್ಶನಕ್ಕೆ ಇಬ್ಬರು ನಂಬಲರ್ಹ ವ್ಯಕ್ತಿಗಳ ಸಾಕ್ಷ್ಯಬೇಕು. ಅವರಿಗೆ ಈ ಕೆಳಗಿನ ಹದೀಸ್ ಆಧಾರವಾಗಿದೆ:

ನನಗೆ ಪ್ರವಾದಿ(ಸ) ಅವರ ಅನೇಕ ಸಹಾಬಿಗಳು ಈ ಹದೀಸನ್ನು ಮುಟ್ಟಿಸಿರುವರು: ಪ್ರವಾದಿ(ಸ) ಹೇಳಿದರು: ನೀವು ಅದನ್ನು(ಚಂದ್ರನನ್ನು) ಕಂಡಾಗ ಉಪವಾಸ ವ್ರತ ಆರಂಭಿಸಿರಿ. ಅದನ್ನು ನೋಡಿಯೇ ಉಪವಾಸ ವ್ರತ ಮುಕ್ತಾಯಗೊಳಿಸಿರಿ. ಅದರಿಂದಲೇ ನಿಮ್ಮ ಇಬಾದತ್‌ಗಳ ಸಮಯ ನಿರ್ಣಯಿಸಿರಿ. ಒಂದು ವೇಳೆ ಮೋಡ ಕವಿದಿದ್ದರೆ 30 ದಿನ ಪೂರ್ಣಗೊಳಿಸಿರಿ. ಇಬ್ಬರು ಮುಸ್ಲಿಮರು ಸಾಕ್ಷ್ಯ ನೀಡಿದರೆ ಉಪವಾಸ ಆರಂಭಿಸಿರಿ ಮತ್ತು ಉಪವಾಸ ವ್ರತವನ್ನು ಮುಕ್ತಾಯಗೊಳಿಸಿರಿ.

[ವರದಿ: ಹ. ಅಬ್ದುರ್ರಹ್ಮಾನ್ ಬಿನ್ ಝೈದ್(ರ) - ಮುಸ್ನದ್ ಇಮಾಮ್ ಅಹ್ಮದ್]

ಆದರೆ ಶವ್ವಾಲ್(ಈದ್)ನ ಚಂದ್ರದರ್ಶನಕ್ಕೆ ಕನಿಷ್ಠ ಇಬ್ಬರು ನಂಬಲರ್ಹ ಮುಸ್ಲಿಮ್ ಪುರುಷರ ಸಾಕ್ಷ್ಯಬೇಕು.

ಪ್ರವಾದಿ(ಸ) ಅವರ ಕಾಲದಲ್ಲಿ ರಮಝಾನ್ ತಿಂಗಳ 29ರ ಸಂಜೆ ಚಂದ್ರದರ್ಶನ ವಾಗದಿದ್ದಾಗ ಜನರು 30ನೇ ಉಪವಾಸ ವ್ರತ ಆಚರಿಸಿದರು. ಬೆಳಿಗ್ಗೆ ಇಬ್ಬರು ಗ್ರಾಮೀಣ ಅರಬರು ಬಂದು ರಾತ್ರಿ ಚಂದ್ರದರ್ಶನವಾದ ಬಗ್ಗೆ ಸಾಕ್ಷ್ಯ ವಹಿಸಿದರು. ಆಗ ಪ್ರವಾದಿ(ಸ) ಜನರಿಗೆ ತಮ್ಮ ಉಪವಾಸ ವ್ರತವನ್ನು ಕೊನೆಗೊಳಿಸುವಂತೆ ಆಜ್ಞಾಪಿಸಿದರು.

[ವರದಿ: ಹ. ರಿಬಿಈ ಹರಾಷ್(ರ) - ಓರ್ವ ಸಹಾಬಿಯಿಂದ - ಅಹ್ಮದ್, ಅಬೂದಾವೂದ್, ದಾರಕುತ್ನೀ, ನಸಾಈ]

## 6. ಒಂದೆಡೆ ಚಂದ್ರದರ್ಶನವಾಗಿ ಇನ್ನೊಂದೆಡೆ ಆಗದಿದ್ದರೆ

ಒಂದೆಡೆ ಚಂದ್ರದರ್ಶನವಾದರೆ ಇತರ ಕಡೆಗಳಲ್ಲೂ ಜನರು ಉಪವಾಸ ಆಚರಿಸ ಬೇಕು ಅಥವಾ ಈದ್‌ನ ಚಂದ್ರದರ್ಶನವಾಗಿದ್ದರೆ ಉಪವಾಸ ವ್ರತ ಮುಗಿಸಬೇಕು. ಏಕೆಂದರೆ ಪ್ರವಾದಿ(ಸ) ಹೀಗೆ ಆದೇಶಿಸಿರುವರು:

"ಅದನ್ನು(ಅರ್ಥಾತ್ ಚಂದ್ರನನ್ನು) ಕಂಡು ಉಪವಾಸ ವ್ರತ ಆಚರಿಸಿರಿ ಮತ್ತು ಅದನ್ನು ಕಂಡು ಉಪವಾಸ ವ್ರತ ಕೊನೆಗೊಳಿಸಿರಿ." [ವರದಿ: ಅಬೂಹುರೈರಾ(ರ) - ಬುಖಾರಿ]

ಈ ಆದೇಶವು ಎಲ್ಲ ಕಡೆಯ ಮುಸ್ಲಿಮರಿಗೂ ಅನ್ವಯಿಸುತ್ತದೆ ಎಂಬುದು ಇಮಾಮ್ ಅಬೂ ಹನೀಫಾ(ರ) ಅವರ ಅಭಿಮತವಾಗಿದೆ.

ಆದರೆ ಇಮಾಮ್ ಶಾಫಿಈ(ರ) ಅವರ ಪ್ರಕಾರ ಈ ಆದೇಶವು ಚಂದ್ರದರ್ಶನ ವಾದ ಕಡೆಯ ಪರಿಸರದ ಜನರಿಗೆ ಮಾತ್ರ ಅನ್ವಯಿಸುತ್ತದೆ.

ಒಂದೆಡೆ ಚಂದ್ರದರ್ಶನವಾದರೆ ಇನ್ನೊಂದೆಡೆ ಅದನ್ನು ಪರಿಗಣಿಸುವ ಅಗತ್ಯವಿಲ್ಲ ದಂತಹ ದೂರ ಎಷ್ಟು ಎಂಬ ಕುರಿತು ಶಾಫಿಈ ಉಲಮಾಗಳಲ್ಲಿ ಭಿನ್ನಾಭಿಪ್ರಾಯವಿದೆ. ಕೆಲವರ ಪ್ರಕಾರ, ಚಂದ್ರ ಉದಿಸುವ ಆಕಾಶದ ಭಾಗವು (ಮತ್‌ಲಅ್) ವಿಭಿನ್ನವಾಗಿದ್ದರೆ ಒಂದೆಡೆಯ ಚಂದ್ರದರ್ಶನವನ್ನು ಇನ್ನೊಂದೆಡೆ ಪರಿಗಣಿಸಲಾಗದು. ಉದಾ: ಸೌದಿ ಅರೇಬಿಯಾ ಮತ್ತು ಇರಾಕ್. 'ಮತ್‌ಲಅ್' ಒಂದೇ ಆಗಿದ್ದರೆ ಎರಡೂ ಕಡೆ ಅದನ್ನು ಪರಿಗಣಿಸಬೇಕು. ಉದಾ: ಬಗ್ದಾದ್ ಮತ್ತು ಕೂಫಾ. ಕೆಲವು ಉಲಮಾಗಳ ಪ್ರಕಾರ, ಈ ದೂರವು ನಮಾಝ್ ಕಸ್ರ್ ಮಾಡಬಹುದಾದಷ್ಟು ಇರಬೇಕು. ಅರ್ಥಾತ್ 48 ಮೈಲಿಗಳು. ಕೆಲವು ಶಾಫಿಈ ವಿದ್ವಾಂಸರ ಪ್ರಕಾರ, ಬೇರೆ ಬೇರೆ ದೇಶಗಳಾದರೆ ಒಂದು ದೇಶದಲ್ಲಾದ ಚಂದ್ರದರ್ಶನವನ್ನು ಇನ್ನೊಂದರಲ್ಲಿ ಪರಿಗಣಿಸಲಾಗದು. ಮತ್ತೆ ಕೆಲವರ ಪ್ರಕಾರ, ಒಂದೆಡೆ ಚಂದ್ರದರ್ಶನವಾದರೆ ಅದು ಯಾವ ಕಡೆಗಳಲ್ಲೆಲ್ಲಾ ಗೋಚರಿಸಲೇ ಬೇಕೋ ಅಂತಹ ಕಡೆಗಳಲ್ಲೆಲ್ಲಾ ಅದನ್ನು ಪರಿಗಣಿಸಬೇಕು. [ಅಲ್ ಫತ್‌ಹುರ್ರಬ್ಬಾನೀ ಭಾಗ - 9, ಪುಟ: 271]

## 7. ಚಂದ್ರದರ್ಶನದ ಪ್ರಾರ್ಥನೆ

ಪ್ರವಾದಿ(ಸ) ಪ್ರಥಮ ಚಂದ್ರದರ್ಶನವಾದಾಗ ಈ ರೀತಿ ಪ್ರಾರ್ಥಿಸುತ್ತಿದ್ದರು:

اَللّٰهُمَّ اَهِلَّـهُ عَلَيْنَـا بِالْاَمْنِ وَالْاِيْمَانِ وَالسَّلَامَةِ وَالْاِسْلَامِ رَبِّي

وَرَبُّكَ اللّٰهُ هِلَالُ رُشْدٍ وَخَيْرٍ (ترمذى)

"ಅಲ್ಲಾಹುಮ್ಮ ಅಹಿಲ್ಲಹೂ ಅಲೈನಾ ಬಿಲ್ ಅಮ್ನಿ ವಲ್ ಈಮಾನಿ ವಸ್ಸಲಾಮತಿ ವಲ್ ಇಸ್ಲಾಮ್. ರಬ್ಬೀ ವರಬ್ಬುಕಲ್ಲಾಹ್. ಹಿಲಾಲು ರುಶ್ದಿನ್ ವ ಖೈರ್."

ಓ ಅಲ್ಲಾಹ್! ನಮ್ಮ ಪಾಲಿಗೆ ಈ ಚಂದ್ರನನ್ನು ಶಾಂತಿ, ವಿಶ್ವಾಸ, ಸಂರಕ್ಷಣೆ ಮತ್ತು ಇಸ್ಲಾಮ್‌ನೊಂದಿಗೆ ಉದಯಿಸು. (ಓ ಚಂದ್ರನೇ) ನನ್ನ ಮತ್ತು ನಿನ್ನ ಪ್ರಭು ಅಲ್ಲಾಹನಾಗಿದ್ದಾನೆ. ಇದು ಸನ್ಮಾರ್ಗದರ್ಶನ ಮತ್ತು ಒಳಿತಿನ ಚಂದ್ರವಾಗಲಿ(ಎಂದು ನಾವು ಅವನಲ್ಲಿ ಪ್ರಾರ್ಥಿಸುತ್ತೇವೆ.) [ವರದಿ: ಹ. ತಲ್ಹಾ ಬಿನ್ ಉಬೈದುಲ್ಲಾಹ್(ರ) - ತಿರ್ಮಿದಿ]

## 8. ಉಪವಾಸ ವ್ರತದ ಅಗತ್ಯಗಳು

ಉಪವಾಸ ವ್ರತಕ್ಕೆ ಎರಡು ವಿಷಯಗಳು ಅತ್ಯಗತ್ಯ. ಅವು ಇಲ್ಲದೆ ಉಪವಾಸ ವ್ರತ ಸಿಂಧುವಾಗದು.

**i) ನಿಯ್ಯತ್(ಸಂಕಲ್ಪ):** ಪ್ರತಿಯೊಂದು ಧಾರ್ಮಿಕ ವಿಧಿಗೆ ನಿಯ್ಯತ್ ಅತ್ಯಗತ್ಯ ವಾಗಿದೆ. ಇದನ್ನು ಫಿಕ್ಹುಸ್ಸುನ್ನಃ ಭಾಗ - 1ರ ವುಝೂ ಮತ್ತು ನಮಾಝ್‌ನ ಅಧ್ಯಾಯ ಗಳಲ್ಲಿ ಈಗಾಗಲೇ ವಿವರಿಸಲಾಗಿದೆ.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಕರ್ಮಗಳು ನಿಯ್ಯತ್(ಸಂಕಲ್ಪ) ಅನ್ನು ಅವಲಂಬಿಸಿದೆ."

[ವರದಿ: ಹ. ಉಮರ್(ರ) - ಬುಖಾರಿ]

ರಮಝಾನ್, ಪ್ರಾಯಶ್ಚಿತ್ತ, ಹಿಂದಿನ ಕಡ್ಡಾಯ ಉಪವಾಸದ ಸಾಲ ಸಂದಾಯ ಮತ್ತು ಹರಕೆಯ ಉಪವಾಸ ವ್ರತಗಳ ನಿಯ್ಯತನ್ನು ಪ್ರತಿ ರಾತ್ರಿ ಫಜ್ರ್ ಆಗುತ್ತಲೇ ಅಥವಾ ಅದಕ್ಕಿಂತ ಮುಂಚೆ ಮಾಡಿಕೊಳ್ಳಬೇಕು.

ಪ್ರವಾದಿ(ಸ) ಹೀಗೆ ಹೇಳಿರುವರು:

"ಯಾವ ವ್ಯಕ್ತಿಯು ಪ್ರಭಾತ ಉದಯದ ವೇಳೆ ಅಥವಾ ಅದಕ್ಕಿಂತ ಮುಂಚೆ ದೃಢ ನಿರ್ಧಾರ(ಅರ್ಥಾತ್ ಉಪವಾಸ ವ್ರತದ ಸಂಕಲ್ಪ) ಮಾಡಿಕೊಳ್ಳಲಿಲ್ಲವೋ ಅವನಿಗೆ ಉಪವಾಸವಿಲ್ಲ. [ವರದಿ: ಹ. ಇಬ್ನು ಉಮರ್, ಹ. ಹಫ್ಸ್ವಾ(ರ) - ಅಹ್ಮದ್, ಅಬೂದಾವೂದ್, ತಿರ್ಮಿದಿ, ಇಬ್ನುಮಾಜಃ, ನಸಾಈ, ಇಬ್ನು ಖುಝೈಮಾ, ಇಬ್ನು ಹಿಬ್ಬಾನ್]

ಇದುವೇ ಇಮಾಮ್ ಶಾಫಿಈ(ರ) ಅವರ ಅಭಿಮತವಾಗಿದೆ. ಆದರೆ ಇಮಾಮ್ ಅಬೂ ಹನೀಫಾ(ರ) ಅವರ ಪ್ರಕಾರ, ರಮಝಾನ್ ಮತ್ತು ನಿರ್ದಿಷ್ಟ ದಿನದ ಹರಕೆಯ ಉಪವಾಸ ವ್ರತಗಳಿಗೆ ಮಧ್ಯಾಹ್ನದ ಒಳಗೆ ನಿಯ್ಯತ್ ಮಾಡಿದರೆ ಸಾಕಾಗುವುದು. ಅವರಿಗೆ ಈ ಕೆಳಗಿನ ಹದೀಸ್ ಆಧಾರವಾಗಿದೆ.

ಒಬ್ಬ ಗ್ರಾಮೀಣ ಅರಬನು ಪ್ರವಾದಿವರ್ಯರ(ಸ) ಬಳಿಗೆ ಬಂದು ಚಂದ್ರದರ್ಶನ ವಾದ ಬಗ್ಗೆ ಸಾಕ್ಷಿ ಹೇಳಿದಾಗ ಪ್ರವಾದಿ(ಸ) ಈ ರೀತಿ ಘೋಷಿಸಿದರು. ಒಬ್ಬ ವ್ಯಕ್ತಿಯು ಈಗಾಗಲೇ ಏನಾದರೂ ತಿಂದಿದ್ದರೆ ಅವನು ದಿನದ ಉಳಿದ ಭಾಗದಲ್ಲಿ ಏನೂ ತಿನ್ನ ಬಾರದು. ಏನೂ ತಿಂದಿಲ್ಲದವನು ಉಪವಾಸ ವ್ರತ ಆಚರಿಸಬೇಕು. [ವರದಿ: ಹ. ಇಬ್ನು ಅಬ್ಬಾಸ್(ರ) - ಅಬೂದಾವೂದ್, ತಿರ್ಮಿದಿ, ಇಬ್ನುಮಾಜಃ, ನಸಾಈ]

**ii)** ಪ್ರಭಾತದಿಂದ ಸೂರ್ಯಾಸ್ತಮದ ತನಕ ಅನ್ನಪಾನೀಯ ಮತ್ತಿತರ ಉಪವಾಸ ಭಂಗವಾಗುವ ಕಾರ್ಯಗಳಿಂದ ದೂರವಿರಬೇಕು. ಈ ಬಗ್ಗೆ ಕರ್ಮಶಾಸ್ತ್ರ ಪಂಡಿತರಲ್ಲಿ ಯಾವುದೇ ಭಿನ್ನಾಭಿಪ್ರಾಯವಿಲ್ಲ. [ಹಿದಾಯತುಲ್ ಮುಜ್ತಹಿದ್ ಭಾಗ - 1, ಪುಟ: 199]

ಅಲ್ಲಾಹನು ಈ ರೀತಿ ಆದೇಶಿಸಿರುವನು: ಉಪವಾಸ ವ್ರತದಂದು ರಾತ್ರಿ ಕಾಲದಲ್ಲಿ ನೀವು ನಿಮ್ಮ ಪತ್ನಿಯೊಂದಿಗೆ ಸಂಪರ್ಕ ಇಟ್ಟುಕೊಳ್ಳುವುದನ್ನು ಹಲಾಲ್ (ಧರ್ಮಸಮ್ಮತ)ಗೊಳಿಸಲಾಗಿರುತ್ತದೆ. ಮತ್ತು ಅಲ್ಲಾಹನು ನಿಮ್ಮ ಪಾಲಿಗೆ ಲಿಖಿತಗೊಳಿಸಿದ ವಸ್ತುವನ್ನು ಅರಸಿರಿ ಮತ್ತು ರಾತ್ರಿ ತಿನ್ನಿರಿ, ಕುಡಿಯಿರಿ ನಿಮಗೆ ಪ್ರಭಾತದ ಬಿಳಿ ನೂಲು ಕಪ್ಪು ನೂಲಿನಿಂದ ಪ್ರತ್ಯೇಕವಾಗುವ ತನಕ. ಆಗ ಈ ಎಲ್ಲ ಕೆಲಸಗಳನ್ನು ತೊರೆದು ರಾತ್ರಿಯ ತನಕ ನಿಮ್ಮ ಉಪವಾಸ ವ್ರತವನ್ನು ಪೂರ್ಣಗೊಳಿಸಿರಿ. (ಪವಿತ್ರ ಕುರ್‌ಆನ್, 2:187)

ಪ್ರವಾದಿ(ಸ) ಈ ರೀತಿ ಹೇಳಿರುವರು: ಇದರ (ಬಿಳಿನೂಲು ಕಪ್ಪು ನೂಲಿನಿಂದ ಪ್ರತ್ಯೇಕವಾಗುವುದರ) ತಾತ್ಪರ್ಯ ರಾತ್ರಿಯ ಅಂಧಕಾರ ಮತ್ತು ದಿನದ ಬೆಳಕಾಗಿದೆ.

[ವರದಿ: ಹ. ಅದಿಯ್ಯ್‌ಬಿನ್ ಹಾತಿಮ್(ರ) - ಬುಖಾರಿ, ಮುಸ್ಲಿಮ್]

## 9. ರಮಝಾನ್ ಉಪವಾಸ ಯಾರ ಮೇಲೆ ಕಡ್ಡಾಯ

ರಮಝಾನ್ ತಿಂಗಳ ಉಪವಾಸ ವ್ರತವು ಪ್ರತಿಯೊಬ್ಬ ಬುದ್ಧಿವಂತ, ಪ್ರೌಢ, ಆರೋಗ್ಯವಂತ ಮತ್ತು ಪ್ರಯಾಣಿಕನಲ್ಲದ ಮುಸ್ಲಿಮ್ ಸ್ತ್ರೀ ಪುರುಷರ ಮೇಲೆ ಕಡ್ಡಾಯ ವಾಗಿದೆ ಎಂಬುದು ಒಂದು ಸರ್ವಸಮ್ಮತ ವಿಧಿ.

[ಹಿದಾಯತುಲ್ ಮುಜ್ತಹಿದ್: ಭಾಗ - 1, ಪುಟ: 193]

ಅಲ್ಲಾಹನು ಈ ರೀತಿ ಆದೇಶಿಸಿರುವನು: **"ನಿಮ್ಮ ಪೈಕಿ ಯಾರು ಈ ತಿಂಗಳನ್ನು ಹೊಂದುತ್ತಾರೋ ಅವರು ಅದರ ಉಪವಾಸ ವ್ರತ ಆಚರಿಸಬೇಕು."**

(ಪವಿತ್ರ ಕುರ್‌ಆನ್, 2:185)

## 10. ಉಪವಾಸ ವ್ರತ ಯಾರಿಗೆ ಕಡ್ಡಾಯವಲ್ಲ?

ಪ್ರೌಢರಾಗದ ಮಕ್ಕಳು, ಬುದ್ಧಿ ಸ್ತಿಮಿತದಲ್ಲಿಲ್ಲದವರು, ರೋಗಿಗಳು, ಪ್ರಯಾಣಿಕರು, ವೃದ್ಧರು, ಗರ್ಭಿಣಿಯರು ಮತ್ತು ಎದೆಹಾಲುಣಿಸುವ ಮಹಿಳೆಯರಿಗೆ ಉಪವಾಸ ವ್ರತ ಕಡ್ಡಾಯವಲ್ಲ. ಈ ಪೈಕಿ ಕೆಲವರ ಮೇಲೆ ಉಪವಾಸ ವ್ರತ ಕಡ್ಡಾಯವಲ್ಲದಿದ್ದರೂ ಉಪವಾಸ ವ್ರತ ಆಚರಿಸುವುದು ಅವರ ಪಾಲಿಗೆ ಉತ್ತಮವಾಗಿದೆ. ಕೆಲವರು ಉಪವಾಸ ವ್ರತ ತೊರೆದು ಆ ಬಳಿಕ ಅದನ್ನು ಸಂದಾಯ ಮಾಡಬೇಕು. ಕೆಲವರಿಗೆ ಉಪವಾಸ ವ್ರತ ತೊರೆಯುವ ಅನುಮತಿಯಿದ್ದರೂ ಅದನ್ನು ನಂತರದ ದಿನಗಳಲ್ಲಿ ಸಂದಾಯ ಮಾಡಬೇಕು ಅಥವಾ ಅದಕ್ಕೆ ಪ್ರಾಯಶ್ಚಿತ್ತವಾಗಿ 'ಫಿದಿಯಾ'(ದಾನ) ಕೊಡಬೇಕು. ಅವುಗಳನ್ನು ನಾವು ಪ್ರತ್ಯ-ಪ್ರತ್ಯೇಕವಾಗಿ ವಿವರಿಸಿದ್ದೇವೆ.

### i) ಪ್ರೌಢರಾಗದ ಮಕ್ಕಳು

ಮಗುವೊಂದು ಪ್ರೌಢಾವಸ್ಥೆಗೆ ತಲುಪುವ ತನಕ ಅದರ ಮೇಲೆ ಉಪವಾಸ ವ್ರತ ಕಡ್ಡಾಯವಲ್ಲ. ಅದರ ಮೇಲೆ ಅದರ ಕಝಾ(ಸಂದಾಯ) ಕೂಡಾ ಇರುವುದಿಲ್ಲ.

ಪ್ರವಾದಿ(ಸ) ಹೀಗೆ ಹೇಳಿರುವರು: ಮೂರು ವಿಧದ ವ್ಯಕ್ತಿಗಳು 'ಮರ್ಫೂಉಲ್ ಕಲಮ್'(ಅರ್ಥಾತ್ ಶರೀಅತ್‌ನ ಪ್ರಕಾರ ಯಾವ ಹೊಣೆಯೂ ಇಲ್ಲದವರು) ಆಗಿರುವರು:

1) ಹುಚ್ಚ - ಅವನ ಹುಚ್ಚು ನಿವಾರಣೆಯಾಗುವ ತನಕ.
2) ನಿದ್ರೆಯಲ್ಲಿರುವವ - ಅವನು ಎಚ್ಚರಗೊಳ್ಳುವ ತನಕ.
3) ಮಗು - ಅದು ಪ್ರೌಢವಾಗುವ ತನಕ.

[ವರದಿ: ಹ. ಅಲೀ(ರ) - ಅಹ್ಮದ್, ಅಬೂದಾವೂದ್, ತಿರ್ಮಿದಿ]

ಮಗು ಉಪವಾಸ ವ್ರತ ಆಚರಿಸಬಲ್ಲ ಪ್ರಾಯಕ್ಕೆ ತಲುಪಿದಾಗ ಅದು ಉಪವಾಸವ್ರತ ಆಚರಿಸುವುದು ಉತ್ತಮವಾಗಿದೆ. ಆದ್ದರಿಂದ ಮಗುವಿನ ಹೆತ್ತವರು ಅದು ಉಪವಾಸ ವ್ರತ ಆಚರಿಸುವಂತೆ ಪ್ರೇರೇಪಿಸಬೇಕು. ಇದರಿಂದ ಮಗುವಿಗೆ ಅದರ ಅಭ್ಯಾಸವಾಗುವುದು.

ಪ್ರವಾದಿ(ಸ) ಆಶೂರಾ(ಮುಹರ್ರಮ್: 10) ದಿನದಂದು ಅನ್ಸಾರ್‌ಗಳ ಊರಿನಲ್ಲಿ ಈ ರೀತಿ ಘೋಷಣೆ ಮಾಡಿಸಿದರು: "ಯಾರು ಉಪವಾಸ ವ್ರತ ಆಚರಿಸಿರುವರೋ ಅವರು ತಮ್ಮ ಉಪವಾಸ ವ್ರತವನ್ನು ಪೂರ್ಣಗೊಳಿಸಲಿ. ಯಾರು ಬೆಳಿಗ್ಗೆ ಉಪವಾಸ ವ್ರತ ಆಚರಿಸಿಲ್ಲವೋ ಅವರು ದಿನದ ಉಳಿದ ಭಾಗದಲ್ಲಿ ಉಪವಾಸ ವ್ರತ ಆಚರಿಸಲಿ." ಆದ್ದರಿಂದ ಆ ಬಳಿಕ ನಾವು 'ಆಶೂರಾ'ದ ಉಪವಾಸ ವ್ರತ ಆಚರಿಸುತ್ತಿದ್ದೆವು. ನಮ್ಮ ಸಣ್ಣ ಮಕ್ಕಳಿಗೂ ಉಪವಾಸ ವ್ರತ ಮಾಡಿಸುತ್ತಿದ್ದೆವು. ನಾವು ಮಸೀದಿಗೆ ಹೋಗುವಾಗ ಅವರಿಗೆ (ಆಡಲಿಕ್ಕಾಗಿ) ಉಣ್ಣೆಯ ಆಟಿಕೆಗಳನ್ನು ಮಾಡಿಕೊಡುತ್ತಿದ್ದೆವು. ಆ ಪೈಕಿ ಯಾರಾದರೂ ಊಟಕ್ಕಾಗಿ ಅಳ ತೊಡಗಿದರೆ ಅವರಿಗೆ ಆಟಿಕೆ ನೀಡುತ್ತಿದ್ದೆವು, 'ಇಫ್ತಾರ್' ಸಮಯ ಬರುವ ತನಕ.

[ವರದಿ: ರುಬೈಅ್ ಬಿನ್ ಮುಅವ್ವಝ್(ರ) - ಬುಖಾರಿ, ಮುಸ್ಲಿಮ್]

ಮಕ್ಕಳನ್ನು ಉಪವಾಸ ವ್ರತ ಆಚರಿಸುವಂತೆ ಪ್ರೇರೇಪಿಸಬೇಕೆಂಬ ಬಗ್ಗೆ ವಿದ್ವಾಂಸರಲ್ಲಿ ಒಮ್ಮತವಿದೆ. ಹನಫೀ ಮತ್ತು ಶಾಫಿಈ ಮದ್‌ಹಬ್ ಪ್ರಕಾರ, ಮಗುವಿಗೆ ಏಳು ವರ್ಷವಾದಾಗ ಉಪವಾಸ ವ್ರತ ಆಚರಿಸಲು ಆದೇಶಿಸುವುದು ಮತ್ತು ಹತ್ತು ವರ್ಷದವ ನಾಗಿಯೂ ಉಪವಾಸ ವ್ರತ ಆಚರಿಸದಿದ್ದರೆ ಹೊಡೆಯುವುದು ಉತ್ತಮವಾಗಿದೆ.

**ii) ಬುದ್ಧಿ ಸ್ತಿಮಿತದಲ್ಲಿಲ್ಲದವರು**

ಬುದ್ಧಿ ಸ್ತಿಮಿತದಲ್ಲಿಲ್ಲದವನ ಮೇಲೆ ಉಪವಾಸ ವ್ರತ ಕಡ್ಡಾಯವಲ್ಲ. ಅವನು ಉಪವಾಸ ವ್ರತ ಆಚರಿಸುವುದು ಕೂಡಾ ಸರಿಯಲ್ಲ. ಇದು ಒಂದು ಸರ್ವಸಮ್ಮತ ನಿಯಮ. ಆದರೆ ಬುದ್ಧಿ ಭ್ರಮಣೆಯ ಕೆಲವು ಸ್ಥಿತಿಗಳಲ್ಲಿ ಉಪವಾಸ ವ್ರತ ಕಝಾ ಆಚರಿಸುವುದು ಕಡ್ಡಾಯವಾಗಿದೆ.

ಇಮಾಮ್ ಅಬೂಹನೀಫಾ(ರ) ಅವರ ಪ್ರಕಾರ, ಪೂರ್ಣ ಬುದ್ಧಿ ಭ್ರಮಣೆ ಇಡೀ ರಮಝಾನ್ ತಿಂಗಳಲ್ಲಿದ್ದರೆ ಅದರ ಕಝಾ ಆಚರಿಸಬೇಕಾಗಿಲ್ಲ. ರಮಝಾನ್ ತಿಂಗಳ ಕೆಲವು

ದಿನಗಳ ತನಕ ಬುದ್ಧಿ ಭ್ರಮಣೆಯಿದ್ದು ಕೆಲವು ದಿನಗಳು ಪ್ರಜ್ಞಾವಸ್ಥೆಯಲ್ಲಿದ್ದರೆ ಮೊದಲ ದಿನಗಳ ಉಪವಾಸ ವ್ರತ ಆಚರಿಸಬಾರದು ಮತ್ತು ಉಳಿದ ದಿನಗಳ ಕಝಾ ಆಚರಿಸಬೇಕು.

ಶಾಫಿಈ ಮದ್‌ಹಬ್ ಪ್ರಕಾರ, ಬುದ್ಧಿ ಭ್ರಮಣೆಯು ಆ ವ್ಯಕ್ತಿಯ ಕಿಡಿಗೇಡಿತನ ದಿಂದಾಗಿದ್ದರೆ ಉಪವಾಸ ವ್ರತದ ಕಝಾ ಆಚರಿಸಬೇಕು. ಅಲ್ಲದಿದ್ದರೆ ಹಾಗೆ ಬಿಟ್ಟು ಹೋದ ಉಪವಾಸ ವ್ರತದ ಕಝಾ ಆಚರಿಸಬೇಕಾಗಿಲ್ಲ.

### iii) ಋತುಸ್ರಾವ ಅಥವಾ ಬಾಣಂತಿತನದ ಸ್ಥಿತಿಯಲ್ಲಿರುವ ಮಹಿಳೆ

ಋತುಸ್ರಾವ ಅಥವಾ ಬಾಣಂತಿತನದ ಸ್ಥಿತಿಯಲ್ಲಿರುವ ಮಹಿಳೆ ಉಪವಾಸ ವ್ರತ ಆಚರಿಸುವುದು ಧರ್ಮಸಮ್ಮತವಲ್ಲ. ಆದರೆ ಬಿಟ್ಟು ಹೋದ ಉಪವಾಸ ವ್ರತಗಳ ಕಝಾ ಆಚರಿಸುವುದು ಆಕೆಗೆ ಕಡ್ಡಾಯವಾಗಿದೆ.

ಪ್ರವಾದಿ(ಸ) ಅವರ ಕಾಲದಲ್ಲಿ ನಾವು ಋತುಸ್ರಾವದ ಸ್ಥಿತಿಯಲ್ಲಿದ್ದಾಗಿನ ಉಪವಾಸ ವ್ರತದ ಕಝಾ ಆಚರಿಸಲು ನಮಗೆ ಆದೇಶಿಸಲಾಗುತ್ತಿತ್ತು. ಆದರೆ ನಮಾಝ್‌ನ ಕಝಾ ಆಚರಿಸಲು ಆದೇಶಿಸಲಾಗುತ್ತಿರಲಿಲ್ಲ. [ವರದಿ: ಹ. ಆಯಿಶಾ(ರ) - ಬುಖಾರಿ, ಮುಸ್ಲಿಮ್]

ಈ ಬಗ್ಗೆ ವಿದ್ವಾಂಸರಲ್ಲಿ ಒಮ್ಮತವಿದೆ.

### iv) ವೃದ್ಧರು

ಉಪವಾಸ ವ್ರತ ಆಚರಿಸುವುದು ಕಷ್ಟವಾಗುವಷ್ಟು ವೃದ್ಧರಾದ ಸ್ತ್ರೀಯರು ಅಥವಾ ಪುರುಷರು ಉಪವಾಸ ವ್ರತ ತೊರೆಯಬಹುದು ಎಂಬ ವಿಷಯದಲ್ಲಿ ಎಲ್ಲ ಇಮಾಮ್‌ಗಳ ಮಧ್ಯೆ ಏಕಭಿಪ್ರಾಯವಿದೆ. [ಹಿದಾಯತುಲ್ ಮುಜ್ತಹಿದ್ ಸಂಪುಟ - 1, ಪುಟ: 202, ಅಲ್‌ಫತ್‌ಹುರ್ರಬ್ಬಾನೀ ಸಂಪುಟ - 1, ಪುಟ: 129]

ಈ ರೀತಿ ಉಪವಾಸ ವ್ರತ ತೊರೆಯುವ ವೃದ್ಧರು ಪ್ರತಿದಿನ ಉಪವಾಸ ವ್ರತದ ಬದಲಿಗೆ ಓರ್ವ ಬಡವನಿಗೆ ಊಟ ಮಾಡಿಸುವುದು ಕಡ್ಡಾಯವಾಗಿದೆ ಎಂಬುದು ಇಮಾಮ್ ಅಬೂಹನೀಫಾ, ಇಮಾಮ್ ಶಾಫಿಈ(ರ) ಸಹಿತ ಹೆಚ್ಚಿನ ಇಮಾಮ್‌ಗಳ ಅಭಿಮತ ವಾಗಿದೆ. ಈ ಬಗ್ಗೆ ಪ್ರವಾದಿವರ್ಯರು(ಸ) ಸ್ಪಷ್ಟವಾದ ಆದೇಶವನ್ನು ನೀಡಿಲ್ಲ. ಆದರೆ ಹ. ಇಬ್ನು ಅಬ್ಬಾಸ್(ರ) ಈ ರೀತಿ ಹೇಳಿರುವರು:

ಉಪವಾಸವಿರಲು ಶಕ್ತರಾದವರು ಉಪವಾಸವಿರದಿದ್ದರೆ 'ಫಿದಿಯಾ'(ಪ್ರಾಯಶ್ಚಿತ್ತ) ನೀಡಬೇಕು. ಒಂದು ದಿನದ ಉಪವಾಸ ವ್ರತದ 'ಫಿದಿಯಾ' ಓರ್ವ ಬಡವನಿಗೆ ಆಹಾರ ನೀಡುವುದಾಗಿದೆ ಎಂಬ ಆಯತ್ (ಇತರರ ಮಟ್ಟಿಗೆ ರದ್ದಾಗಿದ್ದರೂ) ವೃದ್ಧರಾದ ಸ್ತ್ರೀ ಪುರುಷರ ಮಟ್ಟಿಗೆ ರದ್ದಾಗಿಲ್ಲ. ಅವರಿಗೆ ಉಪವಾಸ ವ್ರತ ತೊರೆಯುವ ಅನುಮತಿಯಿದೆ. ಆದರೆ ಅವರು ಅದರ 'ಫಿದಿಯಾ' ನೀಡುವುದು ಕಡ್ಡಾಯವಾಗಿದೆ.

ಹ. ಮುಆದ್ ಬಿನ್ ಜಬಲ್(ರ) ಅವರು 'ಆದುದರಿಂದ ಯಾವನಾದರೂ ಈ ತಿಂಗಳನ್ನು ಹೊಂದಿದಾಗ ಅವನು ಆ ಸಂಪೂರ್ಣ ತಿಂಗಳ ವ್ರತವನ್ನಾಚರಿಸಬೇಕು' (ಸೂರಃ ಅಲ್‌ಬಕರಃ - 185) ಎಂಬ ಆಯತ್ ಪಠಿಸಿ ಹೀಗೆ ಹೇಳಿದರು: "ಅಲ್ಲಾಹನು ರಮಝಾನ್ ತಿಂಗಳ ಉಪವಾಸ ವ್ರತವನ್ನು ಆರೋಗ್ಯವಂತ ಮತ್ತು ಪ್ರಯಾಣಿಕನಲ್ಲದವನಿಗೆ ಕಡ್ಡಾಯಗೊಳಿಸಿರುವನು ಹಾಗೂ ರೋಗಿ ಮತ್ತು ಪ್ರಯಾಣಿಕನಿಗೆ ಅದರಿಂದ ವಿನಾಯಿತಿ ನೀಡಿರುವನು. ಆದ್ದರಿಂದ ಉಪವಾಸ ವ್ರತ ಆಚರಿಸಲು ಸಾಧ್ಯವಿಲ್ಲದ ಮುದುಕ-ಮುದುಕಿಯರು ಬಡವರಿಗೆ ಊಟ ಮಾಡಿಸುವುದು ಕಡ್ಡಾಯವೆಂದು (ಈ ಆಯತ್‌ನಿಂದ) ಸ್ಪಷ್ಟವಾಗುತ್ತದೆ. [ಮುಸ್ನದ್, ಇಮಾಮ್ ಅಹ್ಮದ್]

**v) ಗರ್ಭಿಣಿ ಮತ್ತು ಮೊಲೆ ಹಾಲುಣಿಸುವ ಸ್ತ್ರೀ**

ಗರ್ಭಿಣಿ ಅಥವಾ ಮೊಲೆಹಾಲುಣಿಸುವ ಸ್ತ್ರೀಯು ಉಪವಾಸ ವ್ರತ ಆಚರಿಸುವುದ ರಿಂದ ಆಕೆಗೆ, ಆಕೆಯ ಮಗುವಿಗೆ ಅಥವಾ ಇಬ್ಬರಿಗೂ ಹಾನಿಯಾಗುವ ಆಶಂಕೆಯಿದ್ದರೆ ಅವಳಿಗೆ ಉಪವಾಸ ವ್ರತವನ್ನು ತೊರೆಯುವ ಅನುಮತಿಯಿದೆ.

ಪ್ರವಾದಿ(ಸ) ಈ ರೀತಿ ಹೇಳಿರುವರು: ಅಲ್ಲಾಹನು ಯಾತ್ರಿಕನಿಗೆ ಅರ್ಧ ನಮಾಝನ್ನು ವಿನಾಯಿತಿ ಮಾಡಿರುವನು. ಅದೇ ರೀತಿ ಯಾತ್ರಿಕ, ಗರ್ಭಿಣಿ ಮತ್ತು ಮೊಲೆಹಾಲುಣಿಸುವ ಮಹಿಳೆಗೆ ಉಪವಾಸ ವ್ರತವನ್ನು ವಿನಾಯಿತಿಗೊಳಿಸಿರುವನು. [ವರದಿ: ಹ. ಅನಸ್ ಬಿನ್ ಮಾಲಿಕ್(ರ) - ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ, ಅಹ್ಮದ್]

ಹನಫೀ ಮದ್‌ಹಬ್ ಪ್ರಕಾರ ಗರ್ಭಿಣಿ ಮತ್ತು ಎದೆಹಾಲುಣಿಸುವ ಮಹಿಳೆ ಉಪವಾಸ ವ್ರತ ಆಚರಿಸದಿದ್ದರೆ ಬಿಟ್ಟು ಹೋದ ಉಪವಾಸ ವ್ರತದ ಕಝಾ ಆಚರಿಸಿದರೆ ಸಾಕು. ಆಕೆಗೋ ಮಗುವಿಗೋ ಅಥವಾ ಅವರಿಬ್ಬರಿಗೋ ಹಾನಿಯಾಗುವುದೆಂಬ ಭಯ ವಿದ್ದರೂ 'ಫಿದಿಯಾ' ನೀಡಬೇಕಾಗಿಲ್ಲ.

ಶಾಫಿಈ ಮದ್‌ಹಬ್ ಪ್ರಕಾರ ಕೇವಲ ಮಹಿಳೆಗೆ ಅಥವಾ ಮಹಿಳೆ ಮತ್ತು ಮಗುವಿಗೆ ಹಾನಿಯ ಭಯವಿದ್ದರೆ ಉಪವಾಸ ವ್ರತದ ಕಝಾ ಆಚರಿಸಿದರೆ ಸಾಕು. ಆದರೆ ಮಗುವಿಗೆ ಮಾತ್ರ ಹಾನಿಯ ಸಂಭವವಿದ್ದ ಕಾರಣ ಉಪವಾಸ ವ್ರತ ತೊರೆದರೆ ಅದರ ಕಝಾ ಆಚರಿಸುವುದರ ಜತೆಗೆ ಫಿದಿಯಾ ಕೊಡುವುದೂ ಕಡ್ಡಾಯವಾಗಿದೆ.

**vi) ರೋಗಿ**

ರೋಗಿಯಾದವನಿಗೆ ಉಪವಾಸ ವ್ರತ ತೊರೆಯುವ ಅನುಮತಿಯಿದೆ. ಆದರೆ ನಂತರ ಅದರ ಕಝಾ ಆಚರಿಸಬೇಕು. ಅಲ್ಲಾಹನು ಈ ರೀತಿ ಹೇಳಿರುವನು: "ನಿಮ್ಮ ಪೈಕಿ ರೋಗಿಯಾದವನು ಅಥವಾ ಪ್ರಯಾಣದಲ್ಲಿರುವವನು ಇತರ ದಿನಗಳಲ್ಲಿ ಉಪವಾಸ ವ್ರತದ ಎಣಿಕೆಯನ್ನು ಪೂರ್ಣಗೊಳಿಸಬೇಕು." (ಪವಿತ್ರ ಕುರ್‌ಆನ್, 2:184)

ಉಪವಾಸ ವ್ರತ ಆಚರಿಸಿದರೆ ರೋಗವು ಉಲ್ಬಣಗೊಳ್ಳುವ ಆಶಂಕೆ ಇದ್ದಾಗ ಮಾತ್ರ ಉಪವಾಸ ವ್ರತ ತೊರೆಯುವ ಅನುಮತಿಯಿದೆ ಎಂಬುದು ಒಂದು ಸರ್ವಸಮ್ಮತ ವಿಧಿ. ಆದ್ದರಿಂದ ಉಪವಾಸ ವ್ರತ ಆಚರಿಸಿದರೆ ರೋಗವು ಹೆಚ್ಚಾಗುವ ಸಂಭವವಿಲ್ಲದಿದ್ದರೆ ಉಪವಾಸ ತೊರೆಯಬಾರದು.

[ಅಹ್‌ಕಾಮುಲ್ ಕುರ್‌ಆನ್ - ಜಸ್ಸಾಸ್, ಸಂಪುಟ 1, ಪುಟ: 203, 204]

ಒಬ್ಬನು ನಿತ್ಯ ರೋಗಿಯಾಗಿದ್ದರೆ ಅವನ ಮೇಲೆ ಉಪವಾಸ ವ್ರತದ ಕಝಾ ಆಚರಿಸುವುದು ಕಡ್ಡಾಯವಲ್ಲ. ಆತನು ಫಿದಿಯಾ ನೀಡಿದರೆ ಸಾಕಾಗುವುದು. ಇದು ಎಲ್ಲ ಮದ್‌ಹಬ್‌ಗಳ ಒಮ್ಮತಾಭಿಪ್ರಾಯವಾಗಿದೆ.

**vii) ಪ್ರಯಾಣಿಕ**

ಪ್ರಯಾಣಿಕನಿಗೆ ಉಪವಾಸ ವ್ರತ ತೊರೆಯುವ ಅನುಮತಿಯಿದೆ. ಆದರೆ ನಂತರ ಅದರ ಕಝಾ ಆಚರಿಸಬೇಕು ಎಂಬುದು ಕೂಡಾ ಮೇಲಿನ ಸೂಕ್ತದಿಂದ ವ್ಯಕ್ತವಾಗುತ್ತದೆ. ಪ್ರಯಾಣದಲ್ಲಿ ಉಪವಾಸ ವ್ರತ ಆಚರಿಸುವುದು ಮತ್ತು ಆಚರಿಸದಿರುವುದು ಧರ್ಮಸಮ್ಮತವಾಗಿದೆ.

ಓರ್ವ ಸಹಾಬಿ, ಹಂಝಾ ಬಿನ್ ಅಮ್ರ್ ಅಸ್ಲಮೀ(ರ) ಅತ್ಯಧಿಕ ಉಪವಾಸ ವ್ರತ ಆಚರಿಸುತ್ತಿದ್ದರು. ಅವರು ಪ್ರವಾದಿಯರಲ್ಲಿ(ಸ) ಈ ರೀತಿ ವಿಚಾರಿಸಿದರು: "ನಾನು ಪ್ರಯಾಣದಲ್ಲಿ ಉಪವಾಸ ವ್ರತ ಆಚರಿಸಬಹುದೇ? ಆಗ ಪ್ರವಾದಿ(ಸ) ಹೀಗೆ ಉತ್ತರಿಸಿದರು: "ಬೇಕಾದರೆ ಆಚರಿಸಬಹುದು. ಇಲ್ಲವಾದರೆ ಬಿಡಬಹುದು." [ವರದಿ: ಹ. ಆಯಿಶಾ(ರ) - ಬುಖಾರಿ, ಮುಸ್ಲಿಮ್, ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ]

ನಾವು ಒಂದು ದಿನ ಪ್ರಯಾಣದಲ್ಲಿ ಪ್ರವಾದಿವರ್ಯರ(ಸ) ಜತೆಗಿದ್ದೆವು. ನಮ್ಮ ಪೈಕಿ ಕೆಲವರು ಉಪವಾಸ ವ್ರತ ಆಚರಿಸುತ್ತಿದ್ದರು. ಕೆಲವರು ಆಚರಿಸುತ್ತಿರಲಿಲ್ಲ. ಉಪವಾಸ ವ್ರತ ಆಚರಿಸುವವರು ಆಚರಿಸದವರನ್ನಾಗಲಿ ಆಚರಿಸದವರು ಆಚರಿಸುವವರನ್ನಾಗಲಿ ಆಕ್ಷೇಪಿಸುತ್ತಿರಲಿಲ್ಲ. [ವರದಿ: ಹ. ಅಬೂಸಈದ್(ರ), ಹ. ಜಾಬಿರ್(ರ) - ಮುಸ್ಲಿಮ್]

ಇಮಾಮ್ ಅಬೂಹನೀಫಾ(ರ) ಮತ್ತು ಇಮಾಮ್ ಶಾಫಿಈ(ರ) ಅವರ ಪ್ರಕಾರ ಯಾವ ವ್ಯಕ್ತಿ ಪ್ರಯಾಣದಲ್ಲಿ ಯಾವುದೇ ತೊಂದರೆಯಿಲ್ಲದೆ ಉಪವಾಸ ಆಚರಿಸ ಬಲ್ಲನೋ ಆತನ ಪಾಲಿಗೆ ಉಪವಾಸ ವ್ರತ ಆಚರಿಸುವುದು ಉತ್ತಮವಾಗಿದೆ.

ಪ್ರಯಾಣಿಕನು ರಾತ್ರಿ ಉಪವಾಸ ವ್ರತದ ಸಂಕಲ್ಪ ಮಾಡಿದ್ದರೂ ಹಗಲು ಹೊತ್ತು ಅದನ್ನು ಮುರಿಯುವುದು ಧರ್ಮಸಮ್ಮತವಾಗಿದೆ.

ಮಕ್ಕಾ ವಿಜಯದ ವರ್ಷ ಪ್ರವಾದಿ(ಸ) ಮಕ್ಕಾದ ಕಡೆ ಹೊರಟಾಗ ಅವರು ಉಪವಾಸ ವ್ರತ ಆಚರಿಸಿದ್ದರು. ಜನರೂ ಅವರ ಜತೆ ಉಪವಾಸ ವ್ರತ ಆಚರಿಸಿದ್ದರು.

ಪ್ರವಾದಿ(ಸ) (ಪ್ರಯಾಣದ ಮಧ್ಯೆ) 'ಕರಾಊಲ್ ಗಮೀಮ್' ಎಂಬಲ್ಲಿ ತಲುಪಿದಾಗ ಜನರಿಗೆ ಉಪವಾಸ ಆಚರಿಸುವುದು ಕಷ್ಟವಾಗುತ್ತದೆಂದು ತಿಳಿಯಿತು. ಅವರು ಪ್ರವಾದಿ(ಸ) ಏನು ಮಾಡುತ್ತಾರೆಂದು ನೋಡುತ್ತಿದ್ದರು. ಪ್ರವಾದಿ(ಸ) ಅಸರ್ ನಮಾಝ್‌ನ ಬಳಿಕ ಒಂದು ಲೋಟ ನೀರು ತರಿಸಿ ಅದನ್ನು ಕುಡಿದರು. ಜನರು ಪ್ರವಾದಿ(ಸ) ಅವರ ಕಡೆಗೆ ನೋಡುತ್ತಿದ್ದರು. ಅವರ ಪೈಕಿ ಕೆಲವರು ಉಪವಾಸ ವ್ರತ ತೊರೆದರು. ಇನ್ನು ಕೆಲವರು ಉಪವಾಸ ಆಚರಿಸಿಯೇ ಇದ್ದರು. ಕೆಲವು ಜನರು ಅತ್ಯಂತ ಕಷ್ಟದಿಂದ ಉಪವಾಸ ವ್ರತವನ್ನು ಮುಂದುವರಿಸುತ್ತಿದ್ದರೆಂಬ ಸುದ್ದಿ ಸಿಕ್ಕಿದಾಗ, ಪ್ರವಾದಿ(ಸ) 'ಅವರೇ ಅವಿಧೇಯರು' ಎಂದು ಹೇಳಿದರು. [ವರದಿ: ಹ. ಜಾಬಿರ್(ರ) - ಮುಸ್ಲಿಮ್, ನಸಾಈ, ತಿರ್ಮಿದಿ]

ಒಮ್ಮೆ ಜನರು ಉಪವಾಸ ವ್ರತ ಆಚರಿಸುತ್ತಾ ಪ್ರವಾದಿವರ್ಯರ(ಸ) ಜತೆ ಪ್ರಯಾಣ ಮಾಡುತ್ತಿದ್ದರು. ಪ್ರವಾದಿ(ಸ) ಒಂದು ಹೇಸರಗತ್ತೆಯ ಮೇಲೆ ಸಾಗುತ್ತಿದ್ದರು. ಜನರು ಕಾಲ್ನಡಿಗೆಯಲ್ಲಿ ಸಾಗುತ್ತಿದ್ದರು. ಬೇಸಗೆಯ ದಿನವಾಗಿತ್ತು. ಪ್ರಯಾಣದ ಮಧ್ಯೆ ಮಳೆ ನೀರು ನಿಂತ ಒಂದು ಕೆರೆ ಸಿಕ್ಕಿತು. ಪ್ರವಾದಿ(ಸ) ಜನರಿಗೆ 'ನೀರು ಕುಡಿಯಿರಿ' ಎಂದು ಆದೇಶಿಸಿದರು. ಜನರು ಅದನ್ನು ಪಾಲಿಸಲಿಲ್ಲ. ಆಗ ಪ್ರವಾದಿ(ಸ) ನಾನು ನಿಮ್ಮಂತೆ ಅಲ್ಲ. ನನಗೆ ನಿಮಗಿಂತ ಹೆಚ್ಚು ಸೌಲಭ್ಯವಿದೆ. (ಅರ್ಥಾತ್ ನಾನು ವಾಹನದ ಮೇಲಿದ್ದೇನೆ, ನೀವು ಕಾಲ್ನಡಿಗೆಯಲ್ಲಿರುವಿರಿ) ಎಂದರು. ಆಗಲೂ ಜನರು ನೀರು ಕುಡಿಯಲಿಲ್ಲ. ಆಗ ಪ್ರವಾದಿ(ಸ) ತಮ್ಮ ಸವಾರಿಯಿಂದ ಇಳಿದು ನೀರು ಕುಡಿದರು. ಆಗ ಜನರೂ ನೀರು ಕುಡಿದರು. ಪ್ರವಾದಿ(ಸ) ನೀರು ಕುಡಿಯ ಬಯಸಿರಲಿಲ್ಲ. (ಆದರೆ ಅವರು ಜನರಿಗಾಗಿ ನೀರು ಕುಡಿದರು) [ವರದಿ: ಹ. ಅಬೂಸಈದ್(ರ) - ಅಹ್ಮದ್]

ಆದರೆ ಪ್ರಯಾಣಿಕನಿಗೆ ಈ ವಿನಾಯಿತಿಯಿರುವುದು ಪ್ರಯಾಣದ ಮಧ್ಯೆ ಮಾತ್ರ. ಪ್ರಯಾಣದಲ್ಲಿರುವಾಗಲೇ ರಾತ್ರಿ ವೇಳೆ ಮರುದಿನದ ಉಪವಾಸದ ಸಂಕಲ್ಪ ಮಾಡಿದವನಿಗೆ ಈ ವಿನಾಯಿತಿಯಿದೆ. ರಾತ್ರಿ ಊರಲ್ಲಿದ್ದು ಉಪವಾಸ ವ್ರತದ ಸಂಕಲ್ಪ ಮಾಡಿ ಹಗಲಿನ ವೇಳೆ ಪ್ರಯಾಣ ಆರಂಭಿಸಿದವನು ಮಧ್ಯದಲ್ಲಿ ಉಪವಾಸ ವ್ರತ ತೊರೆಯುವಂತಿಲ್ಲ. ಇದು ಹ. ಇಮಾಮ್ ಅಬೂ ಹನೀಫಾ(ರ) ಮತ್ತು ಇಮಾಮ್ ಶಾಫಿಈ(ರ) ಸಹಿತ ಹೆಚ್ಚಿನ ವಿದ್ವಾಂಸರ ಅಭಿಪ್ರಾಯವಾಗಿದೆ. ಏಕೆಂದರೆ ಉಪವಾಸ ವ್ರತದ ವಿಧಿಯು ಊರಿನಲ್ಲಿ ರುವಾಗ ಮತ್ತು ಪ್ರಯಾಣದಲ್ಲಿರುವಾಗ ಭಿನ್ನವಾಗಿರುತ್ತದೆ. ಊರಲ್ಲಿರುವುದು ಮತ್ತು ಪ್ರಯಾಣದಲ್ಲಿರುವುದು ಒಂದೇ ದಿನವಾದರೆ ನಮಾಝ್‌ನಂತೆ ಉಪವಾಸ ವ್ರತದ ಬಗೆಗೂ ಊರಲ್ಲಿರುವವನ ವಿಧಿಯೇ ಅನ್ವಯವಾಗುವುದು. [ಅಲ್ ಫತ್‌ಹುರ್ರಬ್ಬಾನೀ ಸಂಪುಟ - 10, ಪುಟ: 116]

ನಮಾಝ್ ಕಸ್ರ್ ಮಾಡುವ ಅನುಮತಿಯಿರುವಷ್ಟು ದೂರದ ಪ್ರಯಾಣದಲ್ಲಿ ಉಪವಾಸ ವ್ರತ ಆಚರಿಸದಿರಲು ಅನುಮತಿಯಿದೆ.

## 11. ರಮಝಾನ್ ಉಪವಾಸ ವ್ರತಗಳ ಕಝಾ

ರಮಝಾನ್‌ನ ಕಝಾ ಉಪವಾಸ ವ್ರತಗಳನ್ನು ನಿರಂತರ ಆಚರಿಸಬೇಕಾಗಿಲ್ಲ. ಅವುಗಳನ್ನು ಬೇರೆ ಬೇರೆಯಾಗಿಯೂ ಆಚರಿಸಬಹುದು. ಪವಿತ್ರ ಕುರ್‌ಆನಿನಲ್ಲಿ 'ಇತರ ದಿನಗಳಲ್ಲಿ ಉಪವಾಸ ವ್ರತದ ಸಂಖ್ಯೆಯನ್ನು ಪೂರ್ಣಗೊಳಿಸಲಿ' ಎಂಬ ಪ್ರಸ್ತಾಪವಿದೆ. ಅವುಗಳನ್ನು ನಿರಂತರವಾಗಿ ಆಚರಿಸಬೇಕೇ ಬೇರೆ ಬೇರೆಯಾಗಿ ಆಚರಿಸಬೇಕೇ ಎಂಬ ಪ್ರಸ್ತಾಪವೇ ಇಲ್ಲ. ಆದ್ದರಿಂದ ಈ ಎರಡೂ ರೂಪದಲ್ಲಿ ಅದನ್ನು ನಿರ್ವಹಿಸಬಹುದಾಗಿದೆ.

ಪ್ರವಾದಿ(ಸ) ಈ ರೀತಿ ಹೇಳಿರುವರು:

ರಮಝಾನ್‌ನ ಕಝಾ(ಎರಡೂ ರೀತಿಯಲ್ಲಿ ಸರಿಯೇ ಆಗಿದೆ) ಉಪವಾಸವನ್ನು ನಿರಂತರವೂ ಆಚರಿಸಬಹುದು ಅಥವಾ ಬೇರೆ ಬೇರೆಯೂ ಆಚರಿಸಬಹುದು.

[ವರದಿ: ಹ. ಇಬ್ನು ಉಮರ್(ರ) - ದಾರಕುತ್ನೀ]

## 12. ಮಯ್ಯಿತ್‌ನ ಮೇಲಿರುವ ಉಪವಾಸ ವ್ರತದ ಕಝಾ

ಒಬ್ಬನು ಉಪವಾಸ ವ್ರತಗಳ ಕಝಾ ಇಟ್ಟುಕೊಂಡು ನಿಧನನಾದರೆ ಅವನ ವಾರೀಸುದಾರರು ಅದರ ಕಝಾ ಆಚರಿಸಬೇಕಾಗಿಲ್ಲ ಎಂಬುದು ಹೆಚ್ಚಿನ ವಿದ್ವಾಂಸರ ಅಭಿಮತ. ಆದರೆ ಅವರು ಅವನ ಬಿಟ್ಟು ಹೋದ, ಉಪವಾಸ ವ್ರತಗಳ 'ಫಿದಿಯಾ'ದ ರೂಪದಲ್ಲಿ ಬಡವರಿಗೆ ಊಟ ನೀಡಬೇಕು. [ಬದ್ಲುಲ್ ಮಜ್‌ಹೂದ್ ಸಂಪುಟ - 3, ಪುಟ: 160, ನೈಲುಲ್ ಔತಾರ್ ಸಂಪುಟ - 4, ಪುಟ 201]

ಪ್ರವಾದಿ(ಸ) ಈ ರೀತಿ ಹೇಳಿರುವರು:

ಒಬ್ಬನು ಮೃತನಾಗಿ ಅವನ ಮೇಲೆ ಒಂದು ತಿಂಗಳ ಉಪವಾಸ ವ್ರತದ ಕಝಾ ಇದ್ದರೆ ಅವನ ಕಡೆಯಿಂದ ಪ್ರತಿ ದಿನ ಒಬ್ಬ ಬಡವನಿಗೆ ಊಟ ನೀಡಬೇಕು.

[ವರದಿ: ಹ. ಅಬ್ದುಲ್ಲಾ ಬಿನ್ ಉಮರ್(ರ) - ತಿರ್ಮಿದಿ]

ಇಮಾಮ್ ಶಾಫಿಈ(ರ) ಅವರ ಒಂದು ಅಭಿಪ್ರಾಯದಂತೆ ಮಯ್ಯಿತ್‌ನ ಪರವಾಗಿ ಅದರ ವಾರೀಸುದಾರ ಉಪವಾಸ ವ್ರತದ ಕಝಾ ಆಚರಿಸಬಹುದಾಗಿದೆ. ಅವರಿಗೆ ಈ ಕೆಳಗಿನ ಹದೀಸ್ ಆಧಾರವಾಗಿದೆ.

ಪ್ರವಾದಿ(ಸ) ಹೇಳಿದರು:

ಒಬ್ಬನು ಮೃತನಾಗಿದ್ದು ಅವನ ಮೇಲೆ ಉಪವಾಸ ವ್ರತದ ಕಝಾ ಇದ್ದರೆ ಅವನ ಪರವಾಗಿ ಅವನ ವಾರೀಸುದಾರನು ಉಪವಾಸ ಆಚರಿಸಬೇಕು.

[ವರದಿ: ಹ. ಆಯಿಶಾ(ರ) - ಬುಖಾರಿ, ಮುಸ್ಲಿಮ್, ಅಬೂದಾವೂದ್, ಅಹ್ಮದ್]

ರಮಝಾನ್‌ನ ಉಪವಾಸ ವ್ರತವಾಗಿದ್ದರೂ ಹರಕೆಯ ಉಪವಾಸ ವ್ರತವಾಗಿದ್ದರೂ ಕಝಾ ಆಚರಿಸಬೇಕು.

# ಉಪವಾಸ ವ್ರತ ನಿಷಿದ್ಧವಾದ ದಿನಗಳು

## 1. ಈದುಲ್ ಫಿತ್ರ್ ಮತ್ತು ಈದುಲ್ ಅಝ್‌ಹಾ

ಈ ದಿನಗಳಲ್ಲಿ ಉಪವಾಸ ವ್ರತ ಆಚರಿಸುವುದು ನಿಷಿದ್ಧವಾಗಿದೆ ಎಂಬುದು ಸರ್ವಸಮ್ಮತ ವಿಷಯ. ಅದು ಹರಕೆಯ ಪ್ರಾಯಶ್ಚಿತ್ತ(ಕಫ್ಫಾರ)ದ ಉಪವಾಸ ವ್ರತವಾಗಿರಲಿ ಅಥವಾ ನಫಿಲ್(ಐಚ್ಛಿಕ) ಆಗಿರಲಿ. [ಅಲ್ ಫತ್‌ಹುರಬ್ಬಾನೀ ಸಂಪುಟ - 10, ಪುಟ: 141]

ಪ್ರವಾದಿ(ಸ) ಈ ದಿನಗಳ ಉಪವಾಸ ವ್ರತವನ್ನು ನಿಷೇಧಿಸಿರುವರು:

ಈದುಲ್ ಫಿತ್ರ್ ನಿಮ್ಮ ರಮಝಾನ್‌ನ ಉಪವಾಸಗಳ ಪಾರಣೆಯಾಗಿದೆ. ಈದುಲ್ ಅಝ್‌ಹಾದ ದಿನ ನೀವು ನಿಮ್ಮ ಬಲಿದಾನದ ಮಾಂಸ ತಿನ್ನಿರಿ. [ವರದಿ: ಹ. ಉಮರ್(ರ) - ಬುಖಾರಿ, ಮುಸ್ಲಿಮ್, ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ, ಅಹ್ಮದ್, ಬೈಹಕಿ]

## 2. ತಶ್ರೀಕ್‌ನ ದಿನಗಳು

ಅಯ್ಯಾಮುತ್ತಶ್ರೀಕ್ ಎಂದರೆ ಈದುಲ್ ಅಝ್‌ಹಾದ ನಂತರದ ಮೂರು ದಿನಗಳಾಗಿವೆ. ಅರ್ಥಾತ್ ದುಲ್‌ಹಜ್ಜ್ ತಿಂಗಳ 11, 12 ಮತ್ತು 13 ಈ ಮೂರು ದಿನ ಗಳಲ್ಲೂ ಹರಕೆ, ಪ್ರಾಯಶ್ಚಿತ್ತ ಮತ್ತು ನಫಿಲ್ ಮುಂತಾದ ಯಾವುದೇ ಉಪವಾಸ ಆಚರಿಸು ವುದು ನಿಷಿದ್ಧವಾಗಿದೆ.

ಪ್ರವಾದಿ(ಸ) ಅಬ್ದುಲ್ಲಾ ಬಿನ್ ಹುದಾಫಾರನ್ನು(ರ) ಮಿನಾಕ್ಕೆ ಕಳುಹಿಸುತ್ತಾ ಅಲ್ಲಿ ಸುತ್ತಾಡಿ ಈ ರೀತಿ ಘೋಷಣೆ ಮಾಡಬೇಕೆಂದು ಆದೇಶಿಸಿದರು: "ಈ ದಿನಗಳಲ್ಲಿ (ಅರ್ಥಾತ್ ತಶ್ರೀಕ್‌ನ ದಿನಗಳಲ್ಲಿ) ಉಪವಾಸ ವ್ರತ ಆಚರಿಸಬಾರದು. ಏಕೆಂದರೆ ಇವು ತಿನ್ನುವ ಕುಡಿಯುವ ಮತ್ತು ಅಲ್ಲಾಹನನ್ನು ಸ್ಮರಿಸುವ ದಿನಗಳಾಗಿವೆ."

[ವರದಿ: ಹ. ಅಬೂ ಹುರೈರಾ(ರ) - ಅಹ್ಮದ್, ದಾರಕುತ್ನೀ]

## 3. ಪತಿಯು ಊರಲ್ಲಿರುವಾಗ ಆತನ ಅನುಮತಿಯಿಲ್ಲದೆ ನಫಿಲ್ ಉಪವಾಸ ವ್ರತವನ್ನು ಆಚರಿಸಬಾರದು

ಹೆಚ್ಚಿನ ವಿದ್ವಾಂಸರ ಅಭಿಪ್ರಾಯದ ಪ್ರಕಾರ ಪತಿಯು ಊರಲ್ಲಿರುವಾಗ ಆತನ ಅನುಮತಿಯಿಲ್ಲದೆ ನಫಿಲ್(ಐಚ್ಛಿಕ) ಉಪವಾಸ ವ್ರತ ಆಚರಿಸುವುದು ಪತ್ನಿಗೆ ನಿಷಿದ್ಧವಾಗಿದೆ.

[ಅಲ್ ಫತ್‌ಹುರ್ರಬ್ಬಾನೀ ಸಂಪುಟ - 10, ಪುಟ: 167]

ಪ್ರವಾದಿ(ಸ) ಹೀಗೆ ಹೇಳಿರುವರು: ಮಹಿಳೆಯು ತನ್ನ ಪತಿಯ ಉಪಸ್ಥಿತಿಯಲ್ಲಿ ಆತನ ಅನುಮತಿಯಿಲ್ಲದೆ ಒಂದು ದಿನವೂ ಉಪವಾಸ ವ್ರತ ಆಚರಿಸಬಾರದು- ರಮಝಾನ್‌ನ ಹೊರತು. [ವರದಿ: ಹ. ಅಬೂಹುರೈರಾ(ರ) - ಅಹ್ಮದ್, ಬುಖಾರಿ, ಮುಸ್ಲಿಮ್, ಅಬೂದಾವೂದ್, ಬೈಹಕಿ, ದಾರಿಮಿ] ಹನಫೀ ಕರ್ಮಶಾಸ್ತ್ರ ಪ್ರಕಾರ ಇದು ಕೇವಲ ಮಕ್ರೂಹ್(ಅಪ್ರಿಯ) ಆಗಿದೆ.

## 4. ನಿರಂತರ ಉಪವಾಸ

ಹಗಲು ರಾತ್ರಿ ಇಫ್ತಾರ್ ಮತ್ತು ಸಹ್ರೀ ಇಲ್ಲದೆ ನಿರಂತರವಾಗಿ ಉಪವಾಸ ಆಚರಿಸುವುದು ಕೂಡಾ ನಿಷಿದ್ಧವಾಗಿದೆ. ಇದು ಹೆಚ್ಚಿನ ಕರ್ಮಶಾಸ್ತ್ರ ವಿದ್ವಾಂಸರ ಅಭಿಪ್ರಾಯವಾಗಿದೆ. ಪ್ರವಾದಿ(ಸ) ಕೆಲವು ವೇಳೆ ಇಂತಹ ಉಪವಾಸ ವ್ರತ ಆಚರಿಸು ತ್ತಿದ್ದರು. ಆದರೆ ತಮ್ಮ ಸಮುದಾಯವನ್ನು ಅವರು ಅದರಿಂದ ತಡೆದಿರುವರು.

ಪ್ರವಾದಿ(ಸ) ಈ ರೀತಿ ಮೂರು ಸಲ ಹೇಳಿದರು:

"ನಿರಂತರ ಉಪವಾಸ ವ್ರತ ಆಚರಿಸದಿರಿ" ಜನರು ಕೇಳಿದರು "ತಾವು ನಿರಂತರ ಉಪವಾಸ ವ್ರತ ಆಚರಿಸುತ್ತಿಲ್ಲವೇ?" ಪ್ರವಾದಿ(ಸ) ಹೇಳಿದರು: "ಈ ವಿಷಯದಲ್ಲಿ ನೀವು ನನ್ನಂತೆ ಅಲ್ಲ. ರಾತ್ರೆಯ ವೇಳೆ ನನ್ನ ಪ್ರಭು ನನಗೆ ತಿನ್ನಿಸುತ್ತಾನೆ. ಕುಡಿಸುತ್ತಾನೆ. ಆದ್ದರಿಂದ ನೀವು ನಿಮ್ಮ ಸಾಮರ್ಥ್ಯಕ್ಕೆ ತಕ್ಕ ಕೆಲಸವನ್ನು ಮಾತ್ರ ಮಾಡಿರಿ." [ವರದಿ: ಹ. ಅಬೂ ಹುರೈರಾ(ರ) - ಬುಖಾರಿ, ಮುಸ್ಲಿಮ್, ಅಹ್ಮದ್] ಹನಫೀ ಫಿಕ್ಹ್ ಪ್ರಕಾರ ನಿರಂತರ ಉಪವಾಸ ಆಚರಿಸುವುದು ಮಕ್ರೂಹ್ ಆಗಿದೆ.

## 5. ಉಪವಾಸ ಮಕ್ರೂಹ್ (ಅನಪೇಕ್ಷಿತ) ಆದ ದಿನಗಳು

**i) ಕೇವಲ ಶುಕ್ರವಾರ:** ವಾರದಲ್ಲಿ ಕೇವಲ ಶುಕ್ರವಾರವನ್ನು ಉಪವಾಸ ವ್ರತಕ್ಕಾಗಿ ಆಯ್ಕೆ ಮಾಡುವುದು "ಮಕ್ರೂಹ್" ಆಗಿದೆ. ಆದರೆ ಒಬ್ಬನು ಅದರ ಹಿಂದಿನ ಅಥವಾ ಮುಂದಿನ ದಿನವೂ ಉಪವಾಸ ಆಚರಿಸಿದರೆ ಮಕ್ರೂಹ್ ಆಗುವುದಿಲ್ಲ. ಒಬ್ಬನು ತನ್ನ ವಾಡಿಕೆಯಂತೆ ಉಪವಾಸ ವ್ರತ ಆಚರಿಸುತ್ತಿದ್ದು ಅದರಲ್ಲಿ ಶುಕ್ರವಾರದ ದಿನವೂ ಬಂದರೆ ಅದು ಕೂಡಾ ಮಕ್ರೂಹ್ ಆಗುವುದಿಲ್ಲ. ಶುಕ್ರವಾರ ಆಶೂರಾ ಅಥವಾ ಅರಫಾ ದಿನ ಬಂದರೂ ಅದು ಮಕ್ರೂಹ್ ಆಗುವುದಿಲ್ಲ.

ಒಂದು ಶುಕ್ರವಾರ ಪ್ರವಾದಿ(ಸ) ಪತ್ನಿ ಜುವೈರಿಯಾ(ರ) ಅವರಲ್ಲಿಗೆ ಬಂದರು. ಅಂದು ಜುವೈರಿಯಾ(ರ) ಉಪವಾಸ ಆಚರಿಸಿದ್ದರು. "ನೀನು ನಿನ್ನೆಯೂ ಉಪವಾಸವ್ರತ ಆಚರಿಸಿದ್ದಿಯಾ?" ಎಂದು ಪ್ರವಾದಿ(ಸ) ಪ್ರಶ್ನಿಸಿದರು. ಜುವೈರಿಯಾ(ರ) ಇಲ್ಲವೆಂದಾಗ "ನಾಳೆ ಉಪವಾಸ ವ್ರತ ಆಚರಿಸುತ್ತಿಯಾ" ಎಂದು ವಿಚಾರಿಸಿದರು. ಅವರು ಇಲ್ಲವೆಂದಾಗ ಪ್ರವಾದಿ(ಸ) "ಹಾಗಿದ್ದರೆ ಉಪವಾಸ ವ್ರತ ಮುರಿಯಿರಿ" ಎಂದು ಆದೇಶಿಸಿದರು.

[ವರದಿ: ಹ.ಅಬೂ ಅಯ್ಯೂಬ್ ಹಿಜ್ರೀ(ರ) - ಬುಖಾರಿ, ಅಬೂ ದಾವೂದ್, ನಸಾಈ, ಅಹ್ಮದ್]

ಪ್ರವಾದಿ(ಸ) ಈ ರೀತಿ ಹೇಳಿರುವರು: "ಶುಕ್ರವಾರ ದಿನ ಉಪವಾಸ ವ್ರತ ಆಚರಿಸದಿರಿ. ಅದರ ಜತೆಗೆ ಅದರ ಹಿಂದಿನ ಅಥವಾ ಮುಂದಿನ ದಿನವೂ ಉಪವಾಸ ಆಚರಿಸಿದರೆ ಅಡ್ಡಿಯಿಲ್ಲ." [ವರದಿ: ಹ. ಜಾಬಿರ್ (ರ) - ಬುಖಾರಿ, ಮುಸ್ಲಿಮ್]

ಇಮಾಮ್ ಅಬೂ ಹನೀಫಾ(ರ) ಅವರ ಪ್ರಕಾರ ಕೇವಲ ಶುಕ್ರವಾರದ ಉಪವಾಸ ವ್ರತ ಮಕ್ರೂಹ್ ಅಲ್ಲ. ಅದರ ಆಧಾರ ಈ ಕೆಳಗಿನ ಹದೀಸ್ ಆಗಿದೆ.

ಪ್ರವಾದಿ(ಸ) ಪ್ರತಿ ತಿಂಗಳ ಮೊದಲ ಮೂರು ದಿನಗಳ ಉಪವಾಸ ವ್ರತ ಆಚರಿಸುತ್ತಿದ್ದರು ಮತ್ತು ಶುಕ್ರವಾರದ ಉಪವಾಸ ವ್ರತ ಆಚರಿಸದೆ ಇರುವುದು ಅಪರೂಪವಾಗಿತ್ತು.
[ವರದಿ: ಹ. ಅಬ್ದುಲ್ಲಾ ಬಿನ್ ಮಸ್‌ಊದ್(ರ) - ನಸಾಈ, ಇಬ್ನುಮಾಜಃ, ತಿರ್ಮಿದಿ]

**ii) ಕೇವಲ ಶನಿವಾರದ ಉಪವಾಸ ವ್ರತ:** ಹೆಚ್ಚಿನ ವಿದ್ವಾಂಸರ ಪ್ರಕಾರ ಕೇವಲ ಶನಿವಾರದ ಉಪವಾಸ ವ್ರತ ಆಚರಿಸುವುದು ಮಕ್ರೂಹ್ ಆಗಿದೆ.

ಪ್ರವಾದಿ(ಸ) ಈ ರೀತಿ ಹೇಳಿರುವರು:

ಶನಿವಾರದಂದು ಉಪವಾಸ ವ್ರತ ಆಚರಿಸದಿರಿ. ಆ ದಿನ ಯಾವುದಾದರೂ ಕಡ್ಡಾಯ ಉಪವಾಸ ವ್ರತ ಬಂದಾಗ ಹೊರತು. ನಿಮ್ಮ ಪೈಕಿ ಯಾರಿಗಾದರೂ ತಿನ್ನಲು ದ್ರಾಕ್ಷಿ ಬಳ್ಳಿಯ ಶಾಖೆ ಅಥವಾ ಯಾವುದಾದರೂ ಮರದ ಸಿಪ್ಪೆ ದೊರೆತರೆ ಆತ ಅದನ್ನೇ ತಿನ್ನಲಿ. [ವರದಿ: ಹ. ಅಬ್ದುಲ್ಲಾ ಬಿನ್ ಬಷರ್(ರ) ಅವರು ತಮ್ಮ ಸೋದರಿ ಹ. ಸಮಾಅ್(ರ) ಅವರಿಂದ - ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ, ಅಹ್ಮದ್, ಬೈಹಕಿ, ಹಾಕಿಮ್, ತಬ್ರಾನೀ, ಇಬ್ನು ಹಿಬ್ಬಾನ್]

**iii) ಸಂಶಯದ ದಿನದ ಉಪವಾಸ ವ್ರತ:** ಶಅಬಾನ್ 30ರಂದು ಉಪವಾಸ ಆಚರಿಸುವುದು ಮಕ್ರೂಹ್ ಆಗಿದೆ. 29ರ ಶಅಬಾನ್‌ನ ಸಂಜೆ ಚಂದ್ರದರ್ಶನವಾಗದಿದ್ದರೆ ಮತ್ತು ಮುಂದಿನ ದಿನ ಶಅಬಾನ್ ಮೂವತ್ತೇ ಅಥವಾ ರಮಝಾನ್ ಒಂದೇ ಎಂಬುದು ಖಾತ್ರಿಯಾಗದಿರುವ ಸ್ಥಿತಿಯಲ್ಲಿ ಉಪವಾಸ ಆಚರಿಸುವುದು ಮಕ್ರೂಹ್ ಆಗಿದೆ.

ಸಂಶಯದ ದಿನ ರಮಝಾನ್‌ನ ಉಪವಾಸವೆಂಬ ಸಂಕಲ್ಪದಿಂದ ಉಪವಾಸ ವ್ರತ ಆಚರಿಸುವುದು ನಿಷಿದ್ಧವಾಗಿದೆ.

"ಯಾರು ಸಂಶಯದ ದಿನ ಉಪವಾಸ ಆಚರಿಸಿದನೋ ಅವನು ಪ್ರವಾದಿ ವರ್ಯರ(ಸ) ಆಜ್ಞೋಲ್ಲಂಘನೆ ಮಾಡಿದನು." [ವರದಿ: ಹ. ಅಮ್ಮಾರ್ ಬಿನ್ ಯಾಸಿರ್(ರ) - ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ]

ಒಬ್ಬನು ಸಂಶಯದ ದಿನ ಉಪವಾಸ ಆಚರಿಸಿ ಆ ದಿನ ರಮಝಾನ್ ಆಗಿತ್ತೆಂದು ಮರುದಿನ ತಿಳಿದು ಬಂದರೆ ಹೆಚ್ಚಿನ ಕರ್ಮಶಾಸ್ತ್ರಜ್ಞರ ಪ್ರಕಾರ ಆತನ ಆ ದಿನದ ಉಪವಾಸವನ್ನು ರಮಝಾನ್‌ನ ಉಪವಾಸವೆಂದು ಪರಿಗಣಿಸಲಾಗದು. ಅವನು ಆ ದಿನದ ಕಝಾ ಆಚರಿಸಲೇಬೇಕು. ಆದರೆ ಹನಫೀ ಕರ್ಮಶಾಸ್ತ್ರದಂತೆ ಸಂಶಯದ ಆ ದಿನ ಉಪವಾಸ

ವ್ರತ ಆಚರಿಸಿ ಆತ ಪಾಪ ಮಾಡಿದ್ದಾಗ್ಯೂ ಅವನ ಉಪವಾಸ ವ್ರತವು ರಮಝಾನ್‌ನ ಉಪವಾಸ ವ್ರತವೆಂದೇ ಪರಿಗಣಿಸಲ್ಪಡುವುದು. ಅನಂತರ ಅವನು ಅದರ ಕಝಾ ಆಚರಿಸಬೇಕಾಗಿಲ್ಲ.

**iv)** ಪ್ರತಿನಿತ್ಯ ಉಪವಾಸ ಆಚರಿಸುವುದು: ಪ್ರವಾದಿ(ಸ) ಹೀಗೆ ಹೇಳಿರುವರು: ಯಾರು ಪ್ರತಿನಿತ್ಯ ಉಪವಾಸ ವ್ರತ ಆಚರಿಸಿದನೋ ಅವನು ಎಂದೂ ಉಪವಾಸ ವ್ರತ ಆಚರಿಸದವನಂತೆ.

[ವರದಿ: ಹ. ಅಬ್ದುಲ್ಲಾ ಬಿನ್ ಉಮರ್(ರ) - ಬುಖಾರಿ, ಮುಸ್ಲಿಮ್]

ಪ್ರವಾದಿ(ಸ) ಅವರಲ್ಲಿ ಹೀಗೆ ವಿಚಾರಿಸಲಾಯಿತು. "ಪ್ರತಿನಿತ್ಯ ಉಪವಾಸ ಆಚರಿಸುವವನು ಹೇಗೆ?" (ಅಂದರೆ ಆತನ ಕೃತ್ಯ ಸರಿಯೆ) ಪ್ರವಾದಿ(ಸ) ಹೇಳಿದರು, "ಆತ ಎಂದೂ ಉಪವಾಸ ಆಚರಿಸದಿರಲಿ ಮತ್ತು ಇಫ್ತಾರ್ ಮಾಡದಿರಲಿ" ಅಥವಾ ಪ್ರವಾದಿ(ಸ) ಹೀಗೆ ಹೇಳಿದರು: ಆತ ಉಪವಾಸ ವ್ರತವನ್ನೂ ಆಚರಿಸಲಿಲ್ಲ. ಇಫ್ತಾರ್ ಕೂಡಾ ಮಾಡಲಿಲ್ಲ. [ವರದಿ: ಹ.ಅಬೂ ಕತಾದಾ(ರ) - ಅಹ್ಮದ್, ಮುಸ್ಲಿಮ್, ಅಬೂದಾವೂದ್, ತಿರ್ಮಿದಿ, ನಸಾಈ]

ಈ ಹದೀಸ್‌ಗಳ ಆಧಾರದಲ್ಲಿ ಪ್ರತಿನಿತ್ಯ ಉಪವಾಸ ಆಚರಿಸಬಾರದೆಂಬುದು ಸರ್ವಸಮ್ಮತ ವಿಷಯ. ಆದರೆ ಈ ನಿಷೇಧವು ಎರಡು ಹಬ್ಬಗಳು ಮತ್ತು ತಶ್ರೀಕ್ ದಿನಗಳೂ ಒಳಗೊಂಡಂತೆ ಇಡೀ ವರ್ಷ ಎಡೆಬಿಡದೆ ಉಪವಾಸ ಆಚರಿಸುವವರಿಗೆ ಮಾತ್ರ ಅನ್ವಯಿಸುತ್ತದೆ. ಅದೇ ರೀತಿ ಎಡೆಬಿಡದೆ ಉಪವಾಸ ಆಚರಿಸುವ ಶಕ್ತಿಯಿಲ್ಲದವರು ಮತ್ತು ಹಾಗೆ ಉಪವಾಸ ವ್ರತ ಆಚರಿಸಿ ಇತರರ ಹಕ್ಕುಚ್ಯುತಿ ಮಾಡುವವರಿಗೆ ಕೂಡಾ ಈ ನಿಷೇಧ ಅನ್ವಯಿಸುತ್ತದೆ. ಯಾರಾದರೂ ಇವುಗಳಿಂದ ದೂರವಿದ್ದು ಎಡೆಬಿಡದೆ ಉಪವಾಸ ಆಚರಿಸಿದರೆ ಅದು ಆತನ ಪಾಲಿಗೆ ಆಕ್ಷೇಪಾರ್ಹವಲ್ಲ. ಏಕೆಂದರೆ ಪ್ರವಾದಿ(ಸ) ಕೆಲವು ಮಂದಿ ಸಹಾಬಿಗಳಿಗೆ ಅದರ ಅನುಮತಿ ನೀಡಿದ್ದರು.

ಹಮ್‌ಝಾ ಅಸ್ಲಮಿೀ(ರ) ಅವರು ಪ್ರವಾದಿ(ಸ) ಅವರ ಸನ್ನಿಧಿಗೆ ಬಂದು ಈ ರೀತಿ ಹೇಳಿದರು: "ಪ್ರವಾದಿವರ್ಯರೇ(ಸ)! ನಾನು ಎಡೆಬಿಡದೆ ಉಪವಾಸ ವ್ರತ ಆಚರಿಸುವವನಾಗಿದ್ದೇನೆ. ನಾನು ಪ್ರಯಾಣದ ವೇಳೆಯೂ ಉಪವಾಸ ವ್ರತ ಆಚರಿಸಬಹುದೆ?" "ನಿಮಗಿಷ್ಟವಿದ್ದರೆ ಆಚರಿಸಬಹುದು ಅಥವಾ ಬಿಡಬಹುದು" ಎಂದು ಪ್ರವಾದಿ(ಸ) ಉತ್ತರಿಸಿದರು. [ವರದಿ: ಹ. ಆಯಿಶಾ(ರ) - ಬುಖಾರಿ, ಮುಸ್ಲಿಮ್, ಅಬೂದಾವೂದ್, ಬೈಹಕಿ, ದಾರಿಮೀ, ಮೂತಾ, ಇಮಾಮ್ ಮಾಲಿಕ್, ಅಹ್ಮದ್]

# ಐಚ್ಛಿಕ ಉಪವಾಸ ವ್ರತ

ಕಡ್ಡಾಯ ಉಪವಾಸ ವ್ರತಗಳಲ್ಲದೆ ಈ ಕೆಳಗಿನ ಐಚ್ಛಿಕ ಉಪವಾಸ ವ್ರತಗಳನ್ನು ಆಚರಿಸುವುದು ಸುನ್ನತ್ ಆಗಿದೆ.

## 1. ಶವ್ವಾಲ್ ತಿಂಗಳ ಆರು ಉಪವಾಸ ವ್ರತಗಳು

ಪ್ರವಾದಿ(ಸ) ಹೀಗೆ ಹೇಳಿರುವರು:

"ಯಾರು ರಮಝಾನ್ ತಿಂಗಳ ಉಪವಾಸ ವ್ರತ ಆಚರಿಸಿದ ನಂತರ ಶವ್ವಾಲ್ ನಲ್ಲಿ ಆರು ದಿನಗಳ ಉಪವಾಸ ವ್ರತವನ್ನು ಆಚರಿಸಿದನೋ ಅವನು ಯಾವಾಗಲೂ (ಅಂದರೆ ವರ್ಷವಿಡೀ) ಉಪವಾಸ ವ್ರತ ಆಚರಿಸಿದಂತೆ."

[ವರದಿ: ಹ. ಅಬೂ ಅಯ್ಯೂಬ್ ಅನ್ಸಾರಿ(ರ) - ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ, ಇಬ್ನುಮಾಜಃ, ಅಹ್ಮದ್]

"ಯಾರು ರಮಝಾನ್‌ನ ಉಪವಾಸ ಆಚರಿಸಿದ ನಂತರ ಫಿತ್ರ್(ಅರ್ಥಾತ್ ಈದುಲ್ ಫಿತ್ರ್)ನ ಬಳಿಕ ಆರು ಉಪವಾಸ ವ್ರತಗಳನ್ನು ಆಚರಿಸಿದನೋ ಅವನು ವರ್ಷವಿಡೀ ಉಪವಾಸ ವ್ರತ ಆಚರಿಸಿದಂತೆ. ಏಕೆಂದರೆ ಒಂದು ಪುಣ್ಯ ಮಾಡುವವನಿಗೆ ಹತ್ತು ಪಟ್ಟು ಪ್ರತಿಫಲ ಸಿಗುತ್ತದೆ." [ವರದಿ: ಹ. ಸೌಬಾನ್(ರ) -ಅಹ್ಮದ್, ನಸಾಈ, ಇಬ್ನುಮಾಜಃ, ದಾರಿಮಿ, ಬಝ್ಝಾರ್]

ಈ ಉಪವಾಸ ವ್ರತಗಳನ್ನು ಈದುಲ್ ಫಿತ್ರ್‌ನ ನಂತರ ಎಡೆಬಿಡದೆಯೂ ಆಚರಿಸಬಹುದು ಅಥವಾ ಶವ್ವಾಲ್ ತಿಂಗಳಲ್ಲಿ ಬೇರೆ ಬೇರೆ ದಿನಗಳಲ್ಲೂ ಆಚರಿಸ ಬಹುದು. ಹನಫೀ ಕ್ರಮದಂತೆ ಶವ್ವಾಲ್ ತಿಂಗಳಲ್ಲಿ ಬೇರೆ ಬೇರೆ ದಿನಗಳಲ್ಲಿ ಅದನ್ನು ಆಚರಿಸುವುದು ಉತ್ತಮ. ಶಾಫಿಈ ಕ್ರಮದಂತೆ ಈದುಲ್ ಫಿತ್ರ್‌ನ ನಂತರ ಒಮ್ಮೆಲೇ ಆಚರಿಸುವುದು ಉತ್ತಮ.

## 2. ದುಲ್‌ಹಜ್ಜ್‌ನ ಪ್ರಥಮ ಒಂಬತ್ತು ದಿನಗಳು

ನಾಲ್ಕು ವಿಷಯಗಳನ್ನು ಪ್ರವಾದಿ(ಸ) ಎಂದೂ ತೊರೆಯುತ್ತಿರಲಿಲ್ಲ.

1. ಆಶೂರಾ (ಮುಹರ್ರಮ್ 10)ದ ಉಪವಾಸ ವ್ರತ.

2. ದುಲ್ ಹಜ್ಜ್ ತಿಂಗಳ ಪ್ರಥಮ ಒಂಬತ್ತು ಉಪವಾಸ ವ್ರತ.
3. ಪ್ರತಿ ತಿಂಗಳ ಮೂರು ದಿನಗಳ ಉಪವಾಸ ವ್ರತ.
4. ಫಜ್ರ್ ನಮಾಝ್‌ಗೆ ಮುಂಚೆ ಎರಡು ರಕಅತ್ (ಸುನ್ನತ್) ನಮಾಝ್.

[ವರದಿ: ಹ. ಹಫ್ಸಾ(ರ) - ಅಹ್ಮದ್, ನಸಾಈ]

ಪ್ರವಾದಿ(ಸ) ಹೀಗೆ ಹೇಳಿರುವನು:

ಅರಫಾ ದಿವಸ(ದುಲ್‌ಹಜ್ಜ್ 9)ದ ಉಪವಾಸ ವ್ರತವು ಎರಡು ವರ್ಷಗಳ ಪಾಪಗಳಿಗೆ ಪ್ರಾಯಶ್ಚಿತ್ತವಾಗಿದೆ. ಹಿಂದಿನ ವರ್ಷ ಮತ್ತು ಮುಂದಿನ ವರ್ಷ. [ವರದಿ: ಹ. ಅಬೂಕತಾದಃ (ರ) - ಮುಸ್ಲಿಮ್, ನಸಾಈ, ಅಬೂದಾವೂದ್, ಇಬ್ನುಮಾಜಃ, ಅಹ್ಮದ್]

ಆದರೆ ಅರಫಾ ದಿನದ ಉಪವಾಸ ವ್ರತವು ಹಾಜಿಗಳಲ್ಲದವರಿಗೆ ಮಾತ್ರ. ಹಜ್ಜ್ ಮಾಡುವವರಿಗೆ ಆ ದಿನ ಉಪವಾಸ ಆಚರಿಸುವುದು ಮಕ್ರೂಹ್ ಆಗಿದೆ.

## 3. ಮುಹರ್ರಮ್ 10ರ ಉಪವಾಸ ವ್ರತ

ಪ್ರವಾದಿ(ಸ) ಅವರಲ್ಲಿ ಈ ರೀತಿ ಪ್ರಶ್ನಿಸಲಾಯಿತು:

"ಕಡ್ಡಾಯ ನಮಾಝ್‌ಗಳ ನಂತರ ಅತ್ಯುತ್ತಮ ನಮಾಝ್ ಯಾವುದು?" ಪ್ರವಾದಿ(ಸ) ಹೇಳಿದರು: 'ಮಧ್ಯರಾತ್ರಿಯ ನಮಾಝ್' ಮತ್ತೆ ಪ್ರಶ್ನಿಸಲಾಯಿತು. "ರಮಝಾನ್‌ನ ನಂತರ ಅತ್ಯುತ್ತಮ ಉಪವಾಸ ವ್ರತ ಯಾವುದು?" ಪ್ರವಾದಿ(ಸ) ಹೇಳಿದರು, "ನೀವು ಮುಹರ್ರಮ್ ಎಂದು ಕರೆಯುವ ಅಲ್ಲಾಹನ ತಿಂಗಳ ಉಪವಾಸ ವ್ರತ."

[ವರದಿ: ಹ. ಅಬೂ ಹುರೈರಾ(ರ) - ಅಹ್ಮದ್, ಮುಸ್ಲಿಮ್, ಅಬೂದಾವೂದ್]

ಇಸ್ಲಾಮ್‌ಗಿಂತ ಮುಂಚೆ ಕುರೈಶರು ಅಶೂರಾದ (ಮುಹರ್ರಮ್ 10) ಉಪವಾಸ ವ್ರತ ಆಚರಿಸುತ್ತಿದ್ದರು. ಪ್ರವಾದಿ(ಸ) ಕೂಡಾ ಉಪವಾಸ ವ್ರತ ಆಚರಿಸುತ್ತಿದ್ದರು. ಪ್ರವಾದಿ(ಸ) ಮದೀನಾಕ್ಕೆ ತೆರಳಿದಾಗ ಅಲ್ಲಿಯೂ ಈ ಉಪವಾಸ ವ್ರತ ಆಚರಿಸಿದರು. ಜನರಿಗೂ ಆ ಉಪವಾಸ ವ್ರತ ಆಚರಿಸುವಂತೆ ಆದೇಶಿಸಿದರು. ಆದರೆ ರಮಝಾನ್‌ನ ಉಪವಾಸ ವ್ರತ ಕಡ್ಡಾಯವಾದಾಗ ಪ್ರವಾದಿ(ಸ) ಹೇಳಿದರು, "ಈ ದಿನದ ಉಪವಾಸ ವ್ರತವನ್ನು ಇಷ್ಟವಿದ್ದವನು ಆಚರಿಸಬಹುದು ಅಥವಾ ಬಿಡಬಹುದು." [ವರದಿ: ಹ. ಆಯಿಶಾ(ರ) - ಬುಖಾರಿ, ಮುಸ್ಲಿಮ್]

ಯಹೂದಿಗಳು ಆಶೂರಾ ದಿನವನ್ನು ಗೌರವಿಸುತ್ತಿದ್ದರು ಮತ್ತು ಅಂದು ಹಬ್ಬ ಆಚರಿಸುತ್ತಿದ್ದರು. ಅದಕ್ಕೆ ಪ್ರವಾದಿ(ಸ) ಮುಸ್ಲಿಮರಿಗೆ ಹೇಳಿದರು: "ಅಂದು ನೀವು ಉಪವಾಸ ವ್ರತ ಆಚರಿಸಿರಿ." [ವರದಿ: ಹ. ಅಬೂಮೂಸಾ(ರ) - ಬುಖಾರಿ, ಮುಸ್ಲಿಮ್]

ಯಹೂದಿಗಳು ಆಶೂರಾ ದಿನ ಉಪವಾಸ ಆಚರಿಸುವುದನ್ನು ಪ್ರವಾದಿ(ಸ) ಕಂಡಾಗ 'ಇದೇನು?' ಎಂದು ವಿಚಾರಿಸಿದರು. (ಅರ್ಥಾತ್ ನೀವು ಈ ದಿನ ಉಪವಾಸ ಯಾಕೆ ಆಚರಿಸುತ್ತೀರಿ?) ಆಗ ಅವರು "ಇದೊಂದು ಪುಣ್ಯ ದಿನ. ಈ ದಿನ ಅಲ್ಲಾಹನು ಮೂಸಾ(ಅ) ಮತ್ತು ಇಸ್ರಾಈಲ್ ಜನಾಂಗಕ್ಕೆ ಅವರ ಶತ್ರುಗಳಿಂದ ಮುಕ್ತಿ ನೀಡಿದನು. ಅದಕ್ಕಾಗಿ

ಮೂಸಾ(ಅ) ಉಪವಾಸ ವ್ರತ ಆಚರಿಸುತ್ತಿದ್ದರು. ಆಗ ಪ್ರವಾದಿ(ಸ) ಹೇಳಿದರು: "ಮೂಸಾರ(ಅ) ಮೇಲೆ ನಿಮಗಿಂತ ಹೆಚ್ಚಿನ ಹಕ್ಕು ನಮಗಿದೆ." ಅನಂತರ ಪ್ರವಾದಿ(ಸ) ಅವರು ಆ ದಿನದ ಉಪವಾಸ ವ್ರತವನ್ನು ಸ್ವತಃ ಆಚರಿಸಿ ಜನರಿಗೂ ಆಚರಿಸುವಂತೆ ಆದೇಶಿಸಿದರು.

[ವರದಿ: ಹ. ಇಬ್ನು ಅಬ್ಬಾಸ್(ರ) - ಬುಖಾರಿ, ಮುಸ್ಲಿಮ್]

ಮುಹರ್ರಮ್ 10ರ ಜತೆಗೆ 9 ಅಥವಾ 11ರ ಉಪವಾಸ ವ್ರತ ಆಚರಿಸುವುದು ಕೂಡಾ ಸುನ್ನತ್ ಆಗಿದೆ.

ಪ್ರವಾದಿ(ಸ) ಹೀಗೆ ಹೇಳಿರುವರು:

ಆಶೂರಾದ ದಿನ ಉಪವಾಸ ವ್ರತ ಆಚರಿಸಿರಿ. ಅದರಲ್ಲಿ ಯಹೂದಿಗಳ ಸಂಪ್ರದಾಯವನ್ನು ಮುರಿಯಿರಿ. ಅದಕ್ಕಿಂತ ಒಂದು ದಿನ ಮುಂಚೆ ಅಥವಾ ಒಂದು ದಿನ ನಂತರವೂ ಉಪವಾಸ ವ್ರತ ಆಚರಿಸಿರಿ. [ವರದಿ: ಹ. ಇಬ್ನು ಅಬ್ಬಾಸ್(ರ) - ಅಹ್ಮದ್, ಬೈಹಕಿ]

ಈ ವರದಿಯ ಆಧಾರದಲ್ಲಿ ಕೇವಲ ಮುಹರ್ರಮ್ ಹತ್ತರ ಉಪವಾಸ ವ್ರತ ಆಚರಿಸುವುದು ಹನಫೀ ಕರ್ಮಶಾಸ್ತ್ರ ಪ್ರಕಾರ ಮಕ್ರೂಹ್ (ಅನಪೇಕ್ಷಿತ) ಆಗಿದೆ.

## 4. ಶಅಬಾನ್‌ನ ಉಪವಾಸ ವ್ರತ

ರಮಝಾನ್‌ನ ಹೊರತು ಉಳಿದ ತಿಂಗಳ ಪೈಕಿ ಪ್ರವಾದಿ(ಸ) ಶಅಬಾನ್ ತಿಂಗಳಲ್ಲಿ ಅತ್ಯಧಿಕ ಉಪವಾಸ ವ್ರತಗಳನ್ನು ಆಚರಿಸುತ್ತಿದ್ದರು.

'ನಾನು ರಮಝಾನ್‌ನ ಹೊರತು ಬೇರಾವುದೇ ತಿಂಗಳ ಎಲ್ಲ ದಿನಗಳಲ್ಲಿ ಪ್ರವಾದಿ(ಸ) ಅವರು ಉಪವಾಸ ಆಚರಿಸುವುದನ್ನು ಕಂಡಿಲ್ಲ. ಅದೇ ರೀತಿ ನಾನು ಶಅಬಾನ್‌ನ ಹೊರತು ಬೇರಾವುದೇ ತಿಂಗಳ ಹೆಚ್ಚಿನ ದಿನಗಳಲ್ಲಿ ಪ್ರವಾದಿ(ಸ) ಅವರು ಉಪವಾಸ ಆಚರಿಸು ವುದನ್ನು ಕಂಡಿಲ್ಲ.' [ವರದಿ: ಹ. ಆಯಿಶಾ(ರ) - ಬುಖಾರಿ, ಮುಸ್ಲಿಮ್]

## 5. ಪ್ರತಿಷ್ಠಿತ ತಿಂಗಳುಗಳ (ರಜಬ್, ದುಲ್‌ಕಅದ್, ದುಲ್‌ಹಜ್ಜ್, ಮುಹರ್ರಮ್) ಉಪವಾಸ ವ್ರತಗಳು

ಬಾಹಿಲಾ ಗೋತ್ರದ ಓರ್ವ ಸಹಾಬಿ ಪ್ರವಾದಿವರ್ಯರ(ಸ) ಸನ್ನಿಧಿಯಲ್ಲಿ ಹಾಜರಾದರು. ಮುಂದಿನ ವರ್ಷ ಅವರು ಪುನಃ ಬಂದರು. ಆಗ ಅವರ ದೇಹಸ್ಥಿತಿ ಮತ್ತು ರೂಪವೇ ಬದಲಾಗಿತ್ತು. ಅವರು ಪ್ರವಾದಿ(ಸ) ಅವರಲ್ಲಿ ಹೀಗೆ ಅರಿಕೆ ಮಾಡಿಕೊಂಡರು. "ಅಲ್ಲಾಹನ ಸಂದೇಶವಾಹಕರೇ! ತಾವು ನನ್ನನ್ನು ಗುರುತಿಸಲಿಲ್ಲವೇ?" ಪ್ರವಾದಿ(ಸ) "ನೀವು ಯಾರು?" ಎಂದು ವಿಚಾರಿಸಿದರು. ಆಗ ಅವರು "ನಾನು ಬಾಹಿಲೀ(ಗೋತ್ರದವನು) ಆಗಿರುವೆನು. ನಾನು ಕಳೆದ ವರ್ಷ ತಮ್ಮಲ್ಲಿಗೆ ಬಂದಿದ್ದೆ." "ನೀವು ಇಷ್ಟು ಬದಲಾದುದು ಹೇಗೆ? ಕಳೆದ ವರ್ಷ ನೀವು ಬಹಳ ಚೆನ್ನಾಗಿದ್ದಿರಲ್ಲಾ?" ಎಂದು ಪ್ರವಾದಿ(ಸ) ವಿಚಾರಿ ಸಿದರು. ಆಗ ಅವರು ಹೇಳಿದರು: "ತಮ್ಮಲ್ಲಿಂದ ಹೋದ ಬಳಿಕ ನಾನು ಎಂದೂ ಹಗಲು ಹೊತ್ತು ಊಟ

ಮಾಡಿಲ್ಲ. ನಾನು ಕೇವಲ ರಾತ್ರಿ ವೇಳೆ ಊಟ ಮಾಡುತ್ತೇನೆ." (ಅರ್ಥಾತ್ ನಿರಂತರ ಉಪವಾಸ ವ್ರತ ಆಚರಿಸುತ್ತೇನೆ) ಆಗ ಪ್ರವಾದಿ(ಸ) ಕೇಳಿದರು:

"ನೀವು ನಿಮ್ಮ ದೇಹವನ್ನು ಈ ರೀತಿ ಯಾಕೆ ದಂಡಿಸುತ್ತೀರಿ?" ಅನಂತರ ಪ್ರವಾದಿ(ಸ) "ಸಹನೆಯ ತಿಂಗಳ (ರಮಝಾನ್) ಉಪವಾಸ ವ್ರತ ಆಚರಿಸಿರಿ ಮತ್ತು ಪ್ರತಿ ತಿಂಗಳು ಒಂದು ದಿನ ಉಪವಾಸ ವ್ರತ ಆಚರಿಸಿರಿ" ಎಂದು ಹೇಳಿದರು. ಆಗ ಅವರು ಹೇಳಿದರು: "ಹೆಚ್ಚು ಮಾಡಿರಿ. ನನ್ನಲ್ಲಿ ಶಕ್ತಿಯಿದೆ." "ಹಾಗಾದರೆ ಎರಡು ದಿನ ಉಪವಾಸ ವ್ರತ ಆಚರಿಸಿರಿ" ಎಂದು ಪ್ರವಾದಿ(ಸ) ಆದೇಶಿಸಿದರು. ಅವರು "ಇನ್ನೂ ಹೆಚ್ಚು ಮಾಡಿರಿ" ಎಂದರು. ಪ್ರವಾದಿ(ಸ) "ಮೂರು ದಿನ ಉಪವಾಸ ಆಚರಿಸಿರಿ" ಎಂದರು. ಅವರು "ಇನ್ನೂ ಹೆಚ್ಚು ಮಾಡಿರಿ" ಎಂದಾಗ "ಪ್ರತಿಷ್ಠಿತ ತಿಂಗಳುಗಳಲ್ಲಿ ಉಪವಾಸ ಆಚರಿಸಿರಿ ಮತ್ತು ಬಿಟ್ಟು ಬಿಡಿರಿ, ಪ್ರತಿಷ್ಠಿತ ತಿಂಗಳುಗಳಲ್ಲಿ ಉಪವಾಸ ಆಚರಿಸಿರಿ ಮತ್ತು ಬಿಟ್ಟು ಬಿಡಿರಿ. ಪ್ರತಿಷ್ಠಿತ ತಿಂಗಳಲ್ಲಿ ಉಪವಾಸ ಆಚರಿಸಿರಿ ಮತ್ತು ಬಿಟ್ಟು ಬಿಡಿರಿ" ಎಂದು ಪ್ರವಾದಿ(ಸ) ಹೇಳಿದರು. ಆಗ ಅವರು ತಮ್ಮ ಬೆರಳುಗಳನ್ನು ಜೋಡಿಸಿ ಬಿಟ್ಟು ಬಿಟ್ಟರು. (ಅರ್ಥಾತ್ ಪ್ರತಿಷ್ಠಿತ ತಿಂಗಳುಗಳಲ್ಲೂ ನಿರಂತರ ಉಪವಾಸ ವ್ರತ ಆಚರಿಸದಿರಿ, ಮೂರು ದಿವಸ ಆಚರಿಸಿ ಮೂರು ದಿವಸ ಬಿಟ್ಟು ಬಿಡಿರಿ) [ಅಬೂದಾವೂದ್]

ಪ್ರತಿಷ್ಠಿತ ತಿಂಗಳುಗಳಲ್ಲಿ ಐಚ್ಛಿಕ ಉಪವಾಸ ವ್ರತ ಆಚರಿಸುವ ಬಗ್ಗೆ ವಿದ್ವಾಂಸರಲ್ಲಿ ಒಮ್ಮತವಿದೆ. ಕೆಲವು ಹದೀಸ್‌ಗಳಲ್ಲಿ ರಜಬ್ ತಿಂಗಳಲ್ಲಿ ವಿಶೇಷವಾಗಿ ಐಚ್ಛಿಕ ಉಪವಾಸ ವ್ರತ ಆಚರಿಸುವ ಪುಣ್ಯದ ಬಗ್ಗೆ ಪ್ರಸ್ತಾಪಿಸಲಾಗಿದೆ. ಆದರೆ ಈ ಎಲ್ಲ ಹದೀಸ್‌ಗಳು ಅತ್ಯಂತ ದುರ್ಬಲವಾಗಿವೆ. ಆದ್ದರಿಂದ ಬುಖಾರಿ, ಮುಸ್ಲಿಮ್, ಅಬೂದಾವೂದ್, ನಸಾಈ, ತಿರ್ಮಿದಿ, ಅಹ್ಮದ್, ಇಬ್ನುಮಾಜಃಗಳ ಪೈಕಿ ಯಾರೂ ಅವುಗಳನ್ನು ವರದಿ ಮಾಡಿಲ್ಲ.

[ಅಲ್ ಫತ್‌ಹುರ್ರಬ್ಬಾನೀ ಭಾಗ - 10, ಪುಟ: 196]

## 6. ಶನಿವಾರ, ಆದಿತ್ಯವಾರದ ಉಪವಾಸ

"ಪ್ರವಾದಿ(ಸ) ಇತರ ದಿನಗಳಿಗಿಂತ ಶನಿವಾರ ಮತ್ತು ಆದಿತ್ಯವಾರದಂದು ಹೆಚ್ಚು ಉಪವಾಸ ವ್ರತ ಆಚರಿಸುತ್ತಿದ್ದರು ಮತ್ತು ಹೀಗೆ ಹೇಳುತ್ತಿದ್ದರು: ಈ ಎರಡೂ ದಿನಗಳು ಯಹೂದಿ ಮತ್ತು ಕ್ರೈಸ್ತರ ಹಬ್ಬದ ದಿನಗಳಾಗಿವೆ. ಆದ್ದರಿಂದ ನಾನು ಅವರಿಗೆ ವ್ಯತಿರಿಕ್ತವಾಗಿ ಮಾಡ ಬಯಸುತ್ತೇನೆ." [ವರದಿ: ಹ.ಉಮ್ಮು ಸಲಮ(ರ) - ಅಹ್ಮದ್, ನಸಾಈ, ಬೈಹಕಿ, ಹಾಕಿಮ್, ಇಬ್ನು ಹಿಬ್ಬಾನ್]

## 7. ಸೋಮವಾರ ಮತ್ತು ಗುರುವಾರ

"ಸೋಮವಾರ ಮತ್ತು ಗುರುವಾರ ಉಪವಾಸ ವ್ರತವನ್ನು ಪ್ರವಾದಿ(ಸ) ಕಾದು ನಿಂತು ಮಾಡಿ ಆಚರಿಸುತ್ತಿದ್ದರು."

[ವರದಿ: ಹ. ಆಯಿಶಾ(ರ) - ಅಹ್ಮದ್, ತಿರ್ಮಿದಿ, ನಸಾಈ, ಇಬ್ನುಮಾಜಃ]

ಪ್ರವಾದಿ(ಸ) ಹೀಗೆ ಹೇಳಿರುವರು:

"ಪ್ರತಿ ಸೋಮವಾರ ಮತ್ತು ಗುರುವಾರ ಕರ್ಮಗಳು ಸಮರ್ಪಿಸಲ್ಪಡುತ್ತವೆ. ಆದ್ದರಿಂದ ನನ್ನ ಕರ್ಮಗಳು ನಾನು ಉಪವಾಸಿಗನಾಗಿರುವ ಸ್ಥಿತಿಯಲ್ಲಿ ಸಮರ್ಪಿಸಲ್ಪಡ ಬೇಕೆಂದು ಬಯಸುತ್ತೇನೆ." [ವರದಿ: ಹ. ಅಬೂ ಹುರೈರಾ(ರ) - ಅಹ್ಮದ್, ತಿರ್ಮಿದಿ]

ಪ್ರವಾದಿ(ಸ) ಅವರಲ್ಲಿ ಸೋಮವಾರ ಉಪವಾಸ ವ್ರತ ಆಚರಿಸುವ ಬಗ್ಗೆ ಪ್ರಶ್ನಿಸಿದಾಗ ಅವರು ಹೇಳಿದರು: ಇದು ನಾನು ಹುಟ್ಟಿದ ದಿನ ಮತ್ತು ನನ್ನ ಮೇಲೆ ವಹ್ಯ್ (ದಿವ್ಯವಾಣಿ) ಅವತೀರ್ಣವಾದ ದಿನ."

[ವರದಿ: ಹ. ಅಬೂಕತಾದ(ರ) - ಅಹ್ಮದ್, ಮುಸ್ಲಿಮ್, ಅಬೂದಾವೂದ್]

## 8. ಪ್ರತಿ ತಿಂಗಳ ಮೂರು ದಿನಗಳ ಉಪವಾಸ

ಪ್ರವಾದಿ(ಸ) ಹೀಗೆ ಹೇಳಿರುವರು:

ಪ್ರತಿ ತಿಂಗಳ ಮೂರು ದಿನಗಳ ಉಪವಾಸವು ರಮಝಾನ್ ಉಪವಾಸಗಳ ಜತೆ ಸೇರಿ ಇಡೀ ವರ್ಷದ ಉಪವಾಸವಾಗುತ್ತದೆ.

[ವರದಿ: ಹ. ಅಬೂಕತಾದ(ರ) - ಅಹ್ಮದ್, ಮುಸ್ಲಿಮ್, ಅಬೂದಾವೂದ್]

"ನೀವು ಪ್ರತಿ ತಿಂಗಳು ಮೂರು ಉಪವಾಸ ಆಚರಿಸುವುದಾದರೆ 13, 14 ಮತ್ತು 15ರಂದು ಆಚರಿಸಿರಿ." [ವರದಿ: ಹ. ಅಬೂದರ್(ರ) - ಅಹ್ಮದ್, ನಸಾಈ, ತಿರ್ಮಿದಿ]

## 9. ಒಂದು ದಿನ ಬಿಟ್ಟು ಒಂದು ದಿನದ ಉಪವಾಸ

ಪ್ರವಾದಿ(ಸ) ನನ್ನಲ್ಲಿ ಹೇಳಿದರು: "ಪ್ರತಿ ತಿಂಗಳು ಮೂರು ದಿನಗಳ ಉಪವಾಸ ಆಚರಿಸಿರಿ." ನಾನು ಹೇಳಿದೆ: "ನನಗೆ ಅದಕ್ಕಿಂತ ಹೆಚ್ಚಿನ ಸಾಮರ್ಥ್ಯವಿದೆ." ಆಗ ಪ್ರವಾದಿ(ಸ) ನನಗೆ ಹೆಚ್ಚೆಚ್ಚು ದಿನಗಳ ಉಪವಾಸದ ಅನುಮತಿ ನೀಡಿದರು. ಎಲ್ಲಿಯ ವರೆಗೆಂದರೆ "ಒಂದು ದಿನ ಉಪವಾಸ ಆಚರಿಸಿ ಒಂದು ದಿನ ಬಿಟ್ಟು ಬಿಡಿ. ಇದು ಅತ್ಯುತ್ತಮ ಉಪವಾಸ ವ್ರತ. ಇದು ನನ್ನ ಸೋದರ ದಾವೂದ್(ಅ) ಅವರ ಉಪವಾಸ ವ್ರತವಾಗಿದೆ" ಎಂದರು. [ವರದಿ: ಹ. ಅಬ್ದುಲ್ಲಾ ಬಿನ್ ಅಮ್ರ್(ರ) - ಬುಖಾರಿ, ಮುಸ್ಲಿಮ್]

# ಐಚ್ಛಿಕ ಉಪವಾಸ ವ್ರತದ ವಿಧಿಗಳು

## 1. ನಿಯ್ಯತ್ (ಸಂಕಲ್ಪ)

ನಫಿಲ್(ಐಚ್ಛಿಕ) ಉಪವಾಸ ವ್ರತಗಳಿಗೂ ನಿಯ್ಯತ್(ಸಂಕಲ್ಪ) ಕಡ್ಡಾಯವೆಂಬುದು ಸರ್ವಸಮ್ಮತ ವಿಧಿ. ಹೆಚ್ಚಿನ ವಿದ್ವಾಂಸರ ಪ್ರಕಾರ ಐಚ್ಛಿಕ ಉಪವಾಸ ವ್ರತಕ್ಕೆ ರಾತ್ರಿಯೇ ಸಂಕಲ್ಪ ಮಾಡಿರಬೇಕೆಂದಿಲ್ಲ. ದಿನದ ವೇಳೆಯೂ ಅದರ ನಿಯ್ಯತ್ ಮಾಡಬಹುದಾಗಿದೆ.

ಹ. ಆಯಿಶಾ(ರ) ವರದಿ ಮಾಡಿರುವಂತೆ, ಒಂದು ದಿನ ಪ್ರವಾದಿಯವರು(ಸ) ಅವರ ಮನೆಗೆ ಬಂದು ಈ ರೀತಿ ವಿಚಾರಿಸಿದರು. "ನಿನ್ನ ಬಳಿ ತಿನ್ನಲಿಕ್ಕೆ ಏನಾದರೂ ಇದೆಯೆ?" ಅವರು ಇಲ್ಲವೆಂದಾಗ ಪ್ರವಾದಿ(ಸ) "ಹಾಗಾದರೆ ನಾನು ಉಪವಾಸ ಆಚರಿಸುತ್ತೇನೆ" ಎಂದರು. [ಮುಸ್ಲಿಮ್, ತಿರ್ಮಿದಿ, ಅಬೂದಾವೂದ್, ನಸಾಈ, ಇಬ್ನುಮಾಜಃ]

ದಿನದ ವೇಳೆ ಎಷ್ಟರ ತನಕ ಐಚ್ಛಿಕ ಉಪವಾಸದ ಸಂಕಲ್ಪ ಮಾಡಬಹುದಾಗಿದೆ ಎಂಬುದು ಪ್ರವಾದಿ(ಸ) ಅವರ ಯಾವುದೇ ಹದೀಸ್‌ನಿಂದ ತಿಳಿಯುವುದಿಲ್ಲ.

ಇಮಾಮ್ ಅಬೂ ಹನೀಫಾ(ರ) ಅವರ ಪ್ರಕಾರ ಐಚ್ಛಿಕ ಉಪವಾಸ ವ್ರತಕ್ಕೆ ಮಧ್ಯಾಹ್ನಕ್ಕಿಂತ ಮುಂಚೆ ಸಂಕಲ್ಪ ಮಾಡಿಕೊಳ್ಳಬೇಕು. ಅದರ ನಂತರ ಆಗುವುದಿಲ್ಲ. ಇಮಾಮ್ ಶಾಫಿಈ(ರ) ಅವರ ಪ್ರಕಾರ ಮಧ್ಯಾಹ್ನದ ನಂತರವೂ ನಿಯ್ಯತ್ ಮಾಡಬಹುದು. [ಅಲ್ ಫತ್ಹುರ್ರಬ್ಬಾನೀ]

## 2. ಇಫ್ತಾರ್

**i)** ನಫಿಲ್(ಐಚ್ಛಿಕ) ಉಪವಾಸ ವ್ರತ ಆಚರಿಸುವವನು ದಿನದ ಯಾವುದೇ ಹೊತ್ತು ಅದನ್ನು ಮುರಿದು ಇಫ್ತಾರ್ ಮಾಡಬಹುದಾಗಿದೆ. ಆದರೆ ಅದನ್ನು ಪೂರ್ಣಗೊಳಿಸುವುದೇ ಉತ್ತಮವಾಗಿದೆ.

ಒಂದು ದಿನ ಪ್ರವಾದಿ(ಸ) ನನ್ನಲ್ಲಿಗೆ ಬಂದವರು; "ನಿನ್ನ ಬಳಿ ತಿನ್ನಲು ಏನಾದರೂ ಇದೆಯೇ?" ಎಂದು ವಿಚಾರಿಸಿದರು. ನಾನು 'ಇಲ್ಲ'ವೆಂದಾಗ ಹಾಗಾದರೆ ನಾನು ಉಪವಾಸ ವ್ರತ ಆಚರಿಸುತ್ತೇನೆ ಎಂದರು. ಇನ್ನೊಂದು ದಿನ ಪ್ರವಾದಿ(ಸ) ಬಂದಾಗ ನಾನು ಹೇಳಿದೆ: "ಅಲ್ಲಾಹನ ಸಂದೇಶವಾಹಕರೇ(ಸ)! ನಮಗೆ ಸ್ವಲ್ಪ 'ಹೈಸ್' (ಖರ್ಜೂರ, ಗಿಣ್ಣು ಮತ್ತು ತುಪ್ಪದಿಂದ ಮಾಡಿದ ಒಂದು ಬಗೆಯ ತಿಂಡಿ) ಉಡುಗೊರೆಯಾಗಿ ಸಿಕ್ಕಿದೆ." ಪ್ರವಾದಿ(ಸ)

ಹೇಳಿದರು: "ನನಗೆ ತೋರಿಸಿ ನೋಡುವಾ, ನಾನಂತೂ ಬೆಳಗ್ಗಿನಿಂದ ಉಪವಾಸ ಆಚರಿಸುತ್ತಿದ್ದೇನೆ." ಅನಂತರ ಪ್ರವಾದಿ(ಸ) ಅದನ್ನು ತಿಂದರು. [ವರದಿ: ಹ. ಆಯಿಶಾ(ರ) - ಮುಸ್ಲಿಮ್, ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ]

ನಫಿಲ್(ಐಚ್ಛಿಕ) ಉಪವಾಸ ಆಚರಿಸಿ ದಿನದ ಹೊತ್ತಿನಲ್ಲೇ ಇಫ್ತಾರ್ ಮಾಡಿದರೆ ಅದರ ಕಝಾ ಆಚರಿಸಬೇಕಾಗಿಲ್ಲ ಎಂಬುದು ಹೆಚ್ಚಿನ ವಿದ್ವಾಂಸರ ಅಭಿಪ್ರಾಯ. ಆದರೆ ಇಮಾಮ್ ಅಬೂಹನೀಫಾ(ರ) ಅವರ ಪ್ರಕಾರ ಅದರ ಕಝಾ ಆಚರಿಸಬೇಕು.

**ii) ಯಾವುದರಿಂದ ಇಫ್ತಾರ್ ಮಾಡಬೇಕು:**

ನಮಾಝ್ ಮಾಡುವುದಕ್ಕಿಂತ ಮುಂಚೆ ಪ್ರವಾದಿ(ಸ) ಕೆಲವು ತಾಜಾ ಖರ್ಜೂರಗಳಿಂದ ಉಪವಾಸ ಇಫ್ತಾರ್ ಮಾಡುತ್ತಿದ್ದರು. ತಾಜಾ ಖರ್ಜೂರ ಇಲ್ಲದಿದ್ದರೆ ಉತ್ತುತ್ತೆಯಿಂದ ಇಫ್ತಾರ್ ಮಾಡುತ್ತಿದ್ದರು. ಅದೂ ಇಲ್ಲದಿದ್ದರೆ ಕೆಲವು ಗುಟುಕು ನೀರನ್ನು ಕುಡಿಯುತ್ತಿದ್ದರು.
[ವರದಿ: ಹ. ಅನಸ್(ರ) - ಅಬೂದಾವೂದ್, ಹಾಕಿಮ್, ತಿರ್ಮಿದಿ]

ಪ್ರವಾದಿ(ಸ) ಈ ರೀತಿ ಹೇಳಿರುವರು:

ನಿಮ್ಮ ಪೈಕಿ ಯಾರಿಗಾದರೂ ಉಪವಾಸವಿದ್ದರೆ ಆತ ಉತ್ತುತ್ತೆಯಿಂದ ಇಫ್ತಾರ್ ಮಾಡಲಿ. ಉತ್ತುತ್ತೆ ಸಿಗದಿದ್ದರೆ ನೀರಿನಿಂದ ಉಪವಾಸ ಪಾರಣೆ ಮಾಡಲಿ. ಏಕೆಂದರೆ ನೀರು ಶುದ್ಧಗೊಳಿಸುವ ವಸ್ತುವಾಗಿದೆ. [ವರದಿ: ಹ. ಸಲ್ಮಾನ್(ರ) - ಅಹ್ಮದ್, ತಿರ್ಮಿದಿ]

**iii) ಇಫ್ತಾರ್ ಮಾಡಿಸುವುದರ ಪುಣ್ಯ:**

ಪ್ರವಾದಿ(ಸ) ಈ ರೀತಿ ಹೇಳಿರುವರು:

ಯಾರು ಒಬ್ಬ ಉಪವಾಸಿಗನಿಗೆ ಇಫ್ತಾರ್ ಮಾಡಿಸಿದನೋ ಅವನಿಗೆ ಉಪವಾಸಿಗನಷ್ಟೇ ಪುಣ್ಯವನ್ನು ಲಿಖಿತಗೊಳಿಸಲಾಯಿತು. ಉಪವಾಸಿಗನ ಪುಣ್ಯದಲ್ಲಿ ಯಾವುದೇ ಕಡಿತ ಉಂಟಾಗಲಾರದು. [ವರದಿ: ಹ. ಝೈದ್ ಬಿನ್ ಖಾಲಿದ್ ಜುಹನಿ(ರ) - ಅಹ್ಮದ್, ತಿರ್ಮಿದಿ, ನಸಾಈ, ಇಬ್ನುಮಾಜಃ, ಇಬ್ನು ಖುಝೈಮಾ, ಇಬ್ನು ಹಿಬ್ಬಾನ್]

**iv) ಇಫ್ತಾರ್‌ನ ದುಆ:**

ಪ್ರವಾದಿ(ಸ) ಹೀಗೆ ಹೇಳಿರುವರು:

ಉಪವಾಸಿಗನಿಗೆ ಇಫ್ತಾರ್‌ನ ಸಮಯದಲ್ಲಿ ಪ್ರಾರ್ಥನೆಯಿದೆ. ಅದೆಂದೂ ತಿರಸ್ಕರಿಸಲ್ಪಡುವುದಿಲ್ಲ. [ವರದಿ: ಹ. ಅಬ್ದುಲ್ಲಾ ಬಿನ್ ಅಮ್ರ್ ಬಿನ್ ಆಸ್(ರ), ಇಬ್ನುಮಾಜಃ]

ಇಫ್ತಾರ್‌ನ ಸಮಯದಲ್ಲಿ ಪ್ರವಾದಿ(ಸ) ಈ ರೀತಿ ಪ್ರಾರ್ಥಿಸುತ್ತಿದ್ದರು:

اَللّٰهُمَّ لَكَ صُمْتُ وَعَلٰى رِزْقِكَ اَفْطَرْتُ ، ذَهَبَ الظَّمَاءُ وَابْتَلَّتِ
الْعُرُوْقُ وَثَبَتَ الْاَجْرُ اِنْشَاءَ اللّٰهُ

"ಅಲ್ಲಾಹುಮ್ಮ ಲಕ ಸುಮ್ತು ವ ಅಲಾ ರಿಝ್‌ಕಿಕ ಅಫ್ತರ್ತು. ದಹಬಝ್ಝುಮ್‌ಉ ವಬ್‌ತಲ್ಲತಿಲ್‌ಉರೂಕು ವಸಬತಲ್ ಅಜ್ರು ಇನ್‌ಶಾ ಅಲ್ಲಾಹ್."

ಓ ಅಲ್ಲಾಹ್! ನಾನು ನಿನಗಾಗಿ ಉಪವಾಸ ಆಚರಿಸಿದೆ ಮತ್ತು ನಿನ್ನ ಆಹಾರ ದಿಂದಲೇ ಇಫ್ತಾರ್ ಮಾಡಿದೆ. ದಾಹ ಇಂಗಿತು. ನರಗಳು ತೇವಗೊಂಡವು ಮತ್ತು ಅಲ್ಲಾಹನಿಚ್ಛಿಸಿದರೆ ಪುಣ್ಯವು ಖಾತ್ರಿಯಾಯಿತು. [ವರದಿ: ಹ. ಇಬ್ನು ಉಮರ್(ರ) - ಅಬೂದಾವೂದ್, ನಸಾಈ, ದಾರಕುತ್ನೀ, ಹಾಕಿಮ್]

## 3. ವ್ಯರ್ಥ ಮಾತುಕತೆಯನ್ನು ವರ್ಜಿಸುವುದು

ಪ್ರವಾದಿ(ಸ) ಹೀಗೆ ಹೇಳಿರುವರು:

ನೂರು ಉಪವಾಸವಿದ್ದೂ ಸುಳ್ಳು ಮಾತು ಮತ್ತು ಅಸತ್ಯ ವರ್ತನೆ ಯನ್ನು ತೊರೆಯುವುದಿಲ್ಲವೋ ಆತನು ಅನ್ನಪಾನೀಯ ತೊರೆಯಬೇಕೆಂದು ಅಲ್ಲಾಹನಿಗೆ ಯಾವ ಬಯಕೆಯೂ ಇಲ್ಲ. [ವರದಿ: ಹ. ಅಬೂ ಹುರೈರಾ(ರ) - ಬುಖಾರಿ, ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ]

# ಉಪವಾಸ ವ್ರತದ ಶಿಷ್ಟಾಚಾರಗಳು

## 1. ಸಹ್ರೀ

ಸಹ್ರೀ ಉಣ್ಣುವುದು ಒಳ್ಳೆಯದು ಎಂಬುದು ಒಂದು ಸರ್ವಸಮ್ಮತ ವಿಧಿಯಾಗಿದೆ. ಆದರೆ ಅದು ಕಡ್ಡಾಯವಲ್ಲ. [ಅಲ್ ಫತ್ಹುರ್ರಬ್ಬಾನೀ ಭಾಗ - 10, ಪುಟ: 18]

**i) ಮಹತ್ವ:** ಈ ಕುರಿತು ಬಂದಿರುವ ಅನೇಕ ಹದೀಸ್‌ಗಳ ಪೈಕಿ ಕೆಲವನ್ನು ಇಲ್ಲಿ ಉದ್ಧರಿಸುತ್ತಿದ್ದೇವೆ.

"ಸಹ್ರೀ ಉಣ್ಣಿರಿ. ಏಕೆಂದರೆ ಅದರಲ್ಲಿ ಬರ್ಕತ್(ಸಮೃದ್ಧಿ) ಇದೆ." [ವರದಿ: ಹ. ಅನಸ್(ರ) - ಬುಖಾರಿ, ಮುಸ್ಲಿಮ್, ತಿರ್ಮಿದಿ, ನಸಾಈ, ಇಬ್ನುಮಾಜಃ]

"ಸಹ್ರೀ ಊಟವು ಬರ್ಕತ್ ಆಗಿದೆ. ಆದ್ದರಿಂದ ನೀವು ಅದನ್ನು ತೊರೆಯದಿರಿ. ನಿಮ್ಮ ಪೈಕಿ ಯಾರಾದರೂ ನೀರಿನ ಒಂದು ಗುಟುಕು ಕುಡಿದರೂ ಸರಿಯೆ. ಏಕೆಂದರೆ ಅಲ್ಲಾಹ್ ಮತ್ತು ಅವನ ಮಲಕ್‌ಗಳು ಸಹ್ರೀ ಉಣ್ಣುವವರಿಗೆ ಶಾಂತಿಯನ್ನು ಹರಸುತ್ತಾರೆ."
[ವರದಿ: ಹ. ಅಬೂ ಸಈದ್ ಖುದ್ರೀ(ರ) - ಅಹ್ಮದ್]

ನಮ್ಮ ಮತ್ತು ಗ್ರಂಥದವರ ಉಪವಾಸ ವ್ರತದಲ್ಲಿ ಸಹ್ರೀ ಉಣ್ಣುವ ವ್ಯತ್ಯಾಸವಿದೆ. [ವರದಿ: ಹ. ಅಮ್ರ್ ಬಿನ್ ಆಸ್(ರ) - ಅಹ್ಮದ್, ಮುಸ್ಲಿಮ್, ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನು ಖುಝೈಮ]

**ii) ಸಮಯ:** ಹೆಚ್ಚಿನ ಸಹಾಬಿಗಳು ಮತ್ತು ಇಮಾಮರ ಪ್ರಕಾರ(ಇವರಲ್ಲಿ ಇಮಾಮ್ ಅಬೂಹನೀಫಾ ಮತ್ತು ಶಾಫಿಈ(ರ) ಕೂಡಾ ಸೇರಿದ್ದಾರೆ) ಸಹ್ರೀಯ ಅಂತಿಮ ಸಮಯ ಫಜ್ರ್‌ನ ಉದಯ(ಸುಬಹ್ ಸಾದಿಕ್)ದ ವರೆಗಿದೆ. ಅಲ್ಲಾಹನು ಈ ರೀತಿ ಆದೇಶಿಸಿರುವನು:

"ಇರುಳಿನ ಕರಿ ರೇಖೆಯಿಂದ ಉಷಃ ಕಾಲದ ಬಿಳಿ ರೇಖೆಯು ನಿಮಗೆ ಬೇರ್ಪಟ್ಟು ತೋರುವವರೆಗಿನ ನಿಶಾವಧಿಯಲ್ಲಿ ತಿನ್ನಿರಿ ಮತ್ತು ಕುಡಿಯಿರಿ." (ಪವಿತ್ರ ಕುರ್‌ಆನ್, 2:187)

ಇದನ್ನು ಒಂದು ಹದೀಸ್‌ನಲ್ಲಿ ವಿವರಿಸಲಾಗಿದೆ:

ಪ್ರವಾದಿ(ಸ) ನನಗೆ ನಮಾಝ್ ಮಾಡುವ ಮತ್ತು ಉಪವಾಸ ಆಚರಿಸುವ ವಿಧಾನವನ್ನು ಕಲಿಸಿದರು. ಪ್ರವಾದಿ(ಸ) ಹೇಳಿದರು: "ಈ ರೀತಿ ನಮಾಝ್ ಮಾಡಿರಿ. ಈ ರೀತಿ ಉಪವಾಸ ಆಚರಿಸಿರಿ. ಸೂರ್ಯ ಅಸ್ತಮಿಸಿದಾಗ ತಿನ್ನಿರಿ, ಕುಡಿಯಿರಿ. ಬಿಳಿನೂಲು

ಕಪ್ಪು ನೂಲಿನಿಂದ ಪ್ರತ್ಯೇಕವಾಗಿ ಗುರುತಿಸಲ್ಪಡುವ ತನಕ. ಮೂವತ್ತು ದಿನ ಉಪವಾಸ ವ್ರತಗಳನ್ನು ಆಚರಿಸಿರಿ. ಅದಕ್ಕಿಂತ ಮುಂಚೆ ನಿಮಗೆ ಚಂದ್ರದರ್ಶನವಾಗುವ ಹೊರತು." (ರಾತ್ರಿ) ನಾನು ಒಂದು ಬಿಳಿ ನೂಲು ಮತ್ತು ಕಪ್ಪು ನೂಲು ಹಿಡಿದು ಅದನ್ನು ನೋಡುತ್ತ ಲಿದ್ದೆ. ಆದರೆ ನನಗೆ ಬಿಳಿ ಮತ್ತು ಕಪ್ಪು ನೂಲಿನ ವ್ಯತ್ಯಾಸ ಗೊತ್ತಾಗಲಿಲ್ಲ. ನಾನು ಅದನ್ನು ಪ್ರವಾದಿ(ಸ) ಅವರಿಗೆ ತಿಳಿಸಿದೆ. ಪ್ರವಾದಿ(ಸ) ಮುಗುಳ್ನಗುತ್ತಾ, "ಓ ಹಾತಿಮ್‌ರ ಪುತ್ರರೇ! ಬಿಳಿ ಮತ್ತು ಕಪ್ಪು ಎಂದರೆ ದಿನದ ಬೆಳುಪು ಮತ್ತು ರಾತ್ರೆಯ ಕತ್ತಲೆಯಾಗಿದೆ" ಎಂದರು. [ವರದಿ: ಹ.ಅದೀ ಬಿನ್ ಹಾತಿಮ್(ರ) - ಬುಖಾರಿ, ಮುಸ್ಲಿಮ್, ಅಬೂದಾವೂದ್, ಅಹ್ಮದ್]

ಫಜ್ರ್‌ನ ಅದಾನ್ ಕೇಳುತ್ತಲೇ ತಿನ್ನುವುದನ್ನು ಮತ್ತು ಕುಡಿಯುವುದನ್ನು ನಿಲ್ಲಿಸಬೇಕೆಂಬುದು ಹೆಚ್ಚಿನ ವಿದ್ವಾಂಸರ ಅಭಿಪ್ರಾಯ. ಅದೇ ರೀತಿ ಸಹ್ರೀ ಆದಷ್ಟು ತಡವಾಗಿ ಮಾಡುವುದು ಉತ್ತಮವೆಂಬುದು ಸರ್ವಸಮ್ಮತ ವಿಧಿ. [ಅಲ್ ಫತ್ಹುರ್ರಬ್ಬಾನೀ ಭಾಗ - 10, ಪುಟ: 23]

ಪ್ರವಾದಿ(ಸ) ಈ ರೀತಿ ಹೇಳಿರುವರು:

ಜನರು ಸಹ್ರೀಯಲ್ಲಿ ತಡ ಮಾಡುತ್ತಿರುವ ಮತ್ತು ಇಫ್ತಾರ್‌ನಲ್ಲಿ ತ್ವರೆ ಮಾಡುತ್ತಿರುವ ತನಕ ಉತ್ತಮ ಸ್ಥಿತಿಯಲ್ಲಿರುವರು.

[ವರದಿ: ಹ. ಸಹಲ್ ಬಿನ್ ಸಅದ್(ರ) - ಬುಖಾರಿ, ಮುಸ್ಲಿಮ್]

ಹ. ಝೈದ್ ಬಿನ್ ಸಾಬಿತ್(ರ) ವರದಿ ಮಾಡಿರುವರು:

"ನಾವು ಪ್ರವಾದಿ(ಸ) ಅವರ ಜತೆ ಸಹ್ರೀ ಉಂಡೆವು. ಅನಂತರ ನಾವು ಬಂದೆವು. ಆಗಲೇ ಜಮಾಅತ್ ನಿಂತಿತು." ಸಹ್ರೀ ಮುಗಿಯುವ ಮತ್ತು ನಮಾಝ್ ಆರಂಭವಾಗು ವುದರ ಮಧ್ಯೆ ಎಷ್ಟು ಅಂತರವಿತ್ತು ಎಂದು ಹ. ಝೈದ್‌ರನ್ನು ವಿಚಾರಿಸಿದಾಗ ಅವರು ಹೀಗೆ ಹೇಳಿದರು: "ಒಬ್ಬನು ಐವತ್ತು ಆಯತ್‌ಗಳನ್ನು ಪಠಿಸುವಷ್ಟು ಕಾಲ."

[ಬುಖಾರಿ, ಮುಸ್ಲಿಮ್, ತಿರ್ಮಿದಿ, ನಸಾಈ, ಅಹ್ಮದ್]

## 2. ಇಫ್ತಾರ್

ಸಮಯ: ಉಪವಾಸ ವ್ರತದ ಸಮಯವು ಸೂರ್ಯೋದಯದೊಂದಿಗೆ ಮುಗಿಯುತ್ತದೆ ಎಂಬುದು ಒಂದು ಸರ್ವಸಮ್ಮತ ವಿಧಿ. ಸೂರ್ಯ ಮುಳುಗಿದನೆಂದು ಖಾತ್ರಿಯಾದ ಕೂಡಲೇ ಇಫ್ತಾರ್ ಮಾಡಬೇಕು. [ಅಲ್ ಫತ್ಹುರ್ರಬ್ಬಾನೀ ಭಾಗ - 10, ಪುಟ: 5]

ಪ್ರವಾದಿ(ಸ) ಹೀಗೆ ಹೇಳಿರುವರು:

"ಆ ಕಡೆಯಿಂದ (ಪೂರ್ವದಿಂದ) ರಾತ್ರಿ ಬಂದಾಗ ಮತ್ತು ಈ ಕಡೆಯಿಂದ (ಪಶ್ಚಿಮ ದಿಂದ) ಹಗಲು ಹೊರಟು ಹೋದಾಗ ಉಪವಾಸಿಗನು ತನ್ನ ಉಪವಾಸದ ಇಫ್ತಾರ್ ಮಾಡು ತ್ತಾನೆ." [ವರದಿ: ಹ.ಉಮರ್(ರ) - ಬುಖಾರಿ, ಮುಸ್ಲಿಮ್, ಅಬೂದಾವೂದ್, ತಿರ್ಮಿದಿ]

ಸೂರ್ಯ ಮುಳುಗುತ್ತಲೇ ಇಫ್ತಾರ್ ಮಾಡುವುದು ಉತ್ತಮವಾಗಿದೆಯೆಂಬುದು ಒಂದು ಸರ್ವಸಮ್ಮತ ವಿಧಿ.

ಪ್ರವಾದಿ(ಸ) ಹೀಗೆ ಹೇಳಿರುವರು:

ಜನರು ಇಫ್ತಾರ್ ಮಾಡಲು ತ್ವರೆ ಮಾಡುತ್ತಿರುವ ತನಕ ಇಸ್ಲಾಮ್ ಧರ್ಮವು ಪ್ರಬಲವಾಗಿರುವುದು. ಯಹೂದಿಗಳು ಮತ್ತು ಕ್ರೈಸ್ತರು ಅದರಲ್ಲಿ ತಡ ಮಾಡುತ್ತಾರೆ. [ವರದಿ: ಹ. ಅಬೂ ಹುರೈರಾ(ರ) - ಅಹ್ಮದ್, ಅಬೂದಾವೂದ್, ನಸಾಈ, ಹಾಕಿಮ್]

## 3. ವ್ಯರ್ಥ ಮಾತುಕತೆಯನ್ನು ವರ್ಜಿಸುವುದು

ಪ್ರವಾದಿ(ಸ) ಹೀಗೆ ಹೇಳಿರುವರು: ಯಾರು(ಉಪವಾಸವಿದ್ದಾಗಲೂ) ಸುಳ್ಳು ಮಾತು ಮತ್ತು ಅಸಭ್ಯ ವರ್ತನೆ ಯನ್ನು ತೊರೆಯುವುದಿಲ್ಲವೋ ಆತನು ಅನ್ನ ಪಾನೀಯ ತೊರೆಯಬೇಕೆಂದು ಅಲ್ಲಾಹನಿಗೆ ಯಾವ ಬಯಕೆಯೂ ಇಲ್ಲ. [ವರದಿ: ಹ. ಅಬೂ ಹುರೈರಾ(ರ) - ಬುಖಾರಿ, ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ]

ಉಪವಾಸವು ಅನ್ನ-ಪಾನೀಯಗಳನ್ನು ತೊರೆಯುವುದರ ಹೆಸರಲ್ಲ. ಅದು ವ್ಯರ್ಥ ಮತ್ತು ಅಶ್ಲೀಲ ಮಾತುಗಳನ್ನು ತೊರೆಯುವುದರ ಹೆಸರಾಗಿದೆ. ಯಾರಾದರೂ ನಿಮಗೆ (ಉಪವಾಸದ ಸ್ಥಿತಿಯಲ್ಲಿ) ಬೈದರೆ ಅಥವಾ ನಿಮ್ಮ ಜತೆ ಅಸಭ್ಯವಾಗಿ ವರ್ತಿಸಿದರೆ ನೀವು ಅವನಿಗೆ "ನಾನು ಉಪವಾಸ ಆಚರಿಸುತ್ತಿದ್ದೇನೆ" ಎಂದು ಹೇಳಿರಿ. [ವರದಿ: ಹ. ಅಬೂ ಹುರೈರಾ(ರ) - ಹಾಕಿಮ್, ಇಬ್ನು ಖುಝೈಮಾ, ಇಬ್ನು ಹಿಬ್ಬಾನ್]

## 4. ದಾನ-ಧರ್ಮ, ಕುರ್‌ಆನ್ ಪಠಣ, ದೇವಸ್ಮರಣೆ ಮತ್ತು ಸಲಾತ್‌ಗಳನ್ನು ಹೆಚ್ಚಿಸುವುದು

ಪ್ರವಾದಿ(ಸ) ಎಲ್ಲರಿಗಿಂತ ಹೆಚ್ಚು ಉದಾರಿಯಾಗಿದ್ದರು. ಜಿಬ್ರೀಲರು(ಅ) ಅವರನ್ನು(ಸ) ಭೇಟಿಯಾಗಲು ಬಂದಾಗ ಅವರು ಅತ್ಯಧಿಕ ಉದಾರಿಯಾಗುತ್ತಿದ್ದರು. ಜಿಬ್ರೀಲ್(ಅ) ಪ್ರವಾದಿವರ್ಯರ(ಸ) ಬಳಿಗೆ ರಮಝಾನ್‌ನ ಪ್ರತಿ ರಾತ್ರಿಯಲ್ಲೂ ಬರುತ್ತಿದ್ದರು. ಅವರ ಜತೆ ಪವಿತ್ರ ಕುರ್‌ಆನ್‌ನ ಪಾರಾಯಣ ಮಾಡುತ್ತಿದ್ದರು. ಆಗ ಪ್ರವಾದಿ(ಸ) ಬಿರುಗಾಳಿ ಗಿಂತಲೂ ಅಧಿಕ ಉದಾರಿಯಾಗುತ್ತಿದ್ದರು. [ವರದಿ: ಹ. ಇಬ್ನು ಅಬ್ಬಾಸ್(ರ) - ಬುಖಾರಿ]

## 5. ರಮಝಾನ್‌ನ ಕೊನೆಯ ದಿನಗಳಲ್ಲಿ ಆರಾಧನೆಗಳಲ್ಲಿ ವಿಶೇಷ ತಲ್ಲೀನತೆ

ರಮಝಾನ್‌ನ ಕೊನೆಯ ಹತ್ತು ದಿನಗಳು ಆರಂಭವಾದಾಗ ಪ್ರವಾದಿವರ್ಯರು(ಸ) ರಾತ್ರಿ ಜಾಗರಣೆ ಮಾಡುತ್ತಿದ್ದರು. ತಮ್ಮ ಮನೆಯವರನ್ನೂ ರಾತ್ರಿ ಜಾಗರಣೆ ಮಾಡಿಸು ತ್ತಿದ್ದರು. ಅವರು(ಸ) ಅದಕ್ಕಾಗಿ ಸಂಪೂರ್ಣವಾಗಿ ಟೊಂಕ ಕಟ್ಟುತ್ತಿದ್ದರು.

[ವರದಿ: ಹ. ಆಯಿಶಾ(ರ) - ಬುಖಾರಿ, ಮುಸ್ಲಿಮ್]

ರಮಝಾನ್‌ನ ಕೊನೆಯ ಹತ್ತು ದಿನಗಳಲ್ಲಿ ಪ್ರವಾದಿ(ಸ) (ಆರಾಧನೆಗಳಲ್ಲಿ) ಉಳಿದ ದಿನಗಳಿಗಿಂತ ಹೆಚ್ಚು ತಲ್ಲೀನರಾಗುತ್ತಿದ್ದರು. [ಮುಸ್ಲಿಮ್]

# ಧರ್ಮಸಮ್ಮತವಾದ ವಿಷಯಗಳು

ಉಪವಾಸ ವ್ರತದ ವೇಳೆ ಕೆಲವು ವಿಷಯಗಳ ಬಗ್ಗೆ ಅವು ಧರ್ಮಸಮ್ಮತವೋ ಅಲ್ಲವೋ ಎಂಬ ಬಗ್ಗೆ ಸಂಶಯ ಉಂಟಾಗುತ್ತದೆ. ಆದರೆ ಅವುಗಳು ಸಂಪೂರ್ಣ ಧರ್ಮಸಮ್ಮತವಾಗಿವೆ. ಅವುಗಳನ್ನು ಈ ಕೆಳಗೆ ವಿವರಿಸಲಾಗುತ್ತಿದೆ.

## 1. ಹಲ್ಲುಜ್ಜುವುದು

ಇಮಾಮ್ ಅಬೂಹನೀಫಾ(ರ) ಮತ್ತು ಇಮಾಮ್ ಶಾಫಿಈ(ರ) ಸೇರಿದಂತೆ ಹೆಚ್ಚಿನ ವಿದ್ವಾಂಸರ ಅಭಿಪ್ರಾಯ ಪ್ರಕಾರ ಉಪವಾಸಿಗನು ದಿನದ ಯಾವುದೇ ಹೊತ್ತು ಹಲ್ಲುಜ್ಜುವುದು ಧರ್ಮಸಮ್ಮತವಾಗಿದೆ. ಉಪವಾಸವಿಲ್ಲದ ಸಮಯದಲ್ಲಿ ಯಾವೆಲ್ಲ ಸಮಯದಲ್ಲಿ ಹಲ್ಲುಜ್ಜುವುದು ಸುನ್ನತ್ ಅಥವಾ ಉತ್ತಮವಾಗಿದೆಯೋ ಆ ಸಮಯ ಗಳಲ್ಲೆಲ್ಲಾ ಉಪವಾಸದ ಸ್ಥಿತಿಯಲ್ಲೂ ಹಲ್ಲುಜ್ಜುವುದು ಸುನ್ನತ್ ಅಥವಾ ಉತ್ತಮವಾಗಿದೆ.

"ಪ್ರವಾದಿ(ಸ) ಉಪವಾಸದ ಸ್ಥಿತಿಯಲ್ಲಿ ಎಣಿಸಲಿಕ್ಕಾದಷ್ಟು ಸಲ ಹಲ್ಲುಜ್ಜುತ್ತಿ ದ್ದುದನ್ನು ನಾನು ಕಂಡಿದ್ದೇನೆ."

[ವರದಿ: ಹ. ಆಮಿರ್ ಬಿನ್ ರಬೀಅ(ರ) - ಅಹ್ಮದ್, ತಿರ್ಮಿದಿ]

## 2. ಸ್ನಾನ ಮಾಡುವುದು ಮತ್ತು ತಲೆಗೆ ನೀರು ಸುರಿಯುವುದು

ಉಪವಾಸದ ಸ್ಥಿತಿಯಲ್ಲಿ ಕಡ್ಡಾಯ, ಸುನ್ನತ್ ಅಥವಾ ಇತರ ಯಾವುದೇ ಸ್ನಾನ ಮಾಡುವುದು ಧರ್ಮಸಮ್ಮತವಾಗಿದೆ. ಸೆಕೆ ಅಥವಾ ದಾಹದ ಕಾರಣದಿಂದ ತಣ್ಣೀರ ಸ್ನಾನ ಮಾಡುವುದು ಕೂಡಾ ಧರ್ಮಸಮ್ಮತವಾಗಿದೆ. ಈ ಬಗ್ಗೆ ಯಾರಿಗೂ ಭಿನ್ನಾಭಿಪ್ರಾಯವಿಲ್ಲ.

[ಅಲ್ ಫತ್‌ಹುರ್ರಬ್ಬಾನೀ, ಭಾಗ - 10, ಪುಟ: 49]

ಪ್ರವಾದಿ(ಸ) ಉಪವಾಸದ ಸ್ಥಿತಿಯಲ್ಲಿ ಸೆಕೆ ಅಥವಾ ದಾಹದ ಕಾರಣ ತಲೆಗೆ ನೀರು ಸುರಿಯುತ್ತಿರುವುದನ್ನು ನಾನು ಕಂಡಿದ್ದೇನೆ. [ವರದಿ: ಓರ್ವ ಸಹಾಬಿಯಿಂದ ಅಬೂಬಕರ್ ಬಿನ್ ಅಬ್ದುರ್ರಹ್ಮಾನ್(ರ) - ಬುಖಾರಿ, ಮುಸ್ಲಿಮ್, ಅಹ್ಮದ್, ಮಾಲಿಕ್, ಅಬೂದಾವೂದ್]

ಪ್ರವಾದಿ(ಸ) ಜನಾಬತ್‌ನ ಸ್ಥಿತಿಯಲ್ಲಿ ಬೆಳಗು ಮಾಡುತ್ತಿದ್ದರು. ಅವರು(ಸ) ಉಪವಾಸದಿಂದಿರುತ್ತಿದ್ದರು. ಅನಂತರ ಅವರು ಸ್ನಾನ ಮಾಡುತ್ತಿದ್ದರು.

[ವರದಿ: ಹ. ಆಯಿಶಾ(ರ) - ಬುಖಾರಿ, ಮುಸ್ಲಿಮ್, ಅಹ್ಮದ್]

## 3. ಬಾಯಿ ಮುಕ್ಕಳಿಸುವುದು ಮತ್ತು ಮೂಗಿಗೆ ನೀರು ಹಾಯಿಸುವುದು

ಉಪವಾಸದ ಸ್ಥಿತಿಯಲ್ಲಿ ಬಾಯಿ ಮುಕ್ಕಳಿಸುವುದು ಮತ್ತು ಮೂಗಿನ ರಂಧ್ರಗಳಿಗೆ ನೀರು ಹಾಯಿಸುವುದು ಆಕ್ಷೇಪಾರ್ಹವಲ್ಲ. ಆದರೆ ಮೂಗಿಗೆ ನೀರು ಹಾಯಿಸುವಾಗ ಅತಿಯಾಗ ಬಾರದು. ಉಪವಾಸವಿಲ್ಲದ ಸ್ಥಿತಿಯಲ್ಲಾದರೆ ಹಾಗೆ ಮಾಡುವುದು ಒಳ್ಳೆಯದು.

"(ವುಝೂ ಮಾಡುತ್ತಾ) ಮೂಗಿಗೆ ನೀರು ಹಾಯಿಸುವಾಗ ನೀವು ಉಪವಾಸದಲ್ಲಿಲ್ಲ ದಿದ್ದರೆ ಅತಿರೇಕ ಮಾಡಿರಿ." [ವರದಿ: ಹ. ಲಕೀತ್(ರ) - ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ, ಇಬ್ನು ಖುಝೈಮಾ, ಹಾಕಿಮ್]

## 4. ಸುರ್ಮಾ ಹಚ್ಚುವುದು

ಇಮಾಮ್ ಅಬೂಹನೀಫಾ(ರ) ಮತ್ತು ಇಮಾಮ್ ಶಾಫಿಈ(ರ) ಸಮೇತ ಹೆಚ್ಚಿನ ಪಂಡಿತರ ಪ್ರಕಾರ ಉಪವಾಸದ ಸ್ಥಿತಿಯಲ್ಲಿ ಕಣ್ಣಿಗೆ ಸುರ್ಮಾ ಹಚ್ಚುವುದು ಆಕ್ಷೇಪಾರ್ಹವಲ್ಲ.

## 5. ರಕ್ತ ತೆಗೆಸುವುದು

ಯಾವುದಾದರೂ ಚಿಕಿತ್ಸೆಗಾಗಿ ಉಪವಾಸ ವ್ರತದ ಸ್ಥಿತಿಯಲ್ಲಿ ಶರೀರದ ಯಾವುದೇ ಭಾಗದ ರಕ್ತ ತೆಗೆಸುವುದು ಧರ್ಮಬದ್ಧವಾಗಿದೆ.

ಪ್ರವಾದಿ(ಸ) ರಕ್ತ ತೆಗೆಸಿದರು. ಅವರು ಆಗ ಇಹ್ರಾಮ್‌ನ ಸ್ಥಿತಿಯಲ್ಲಿದ್ದು ಉಪವಾಸ ಆಚರಿಸುತ್ತಿದ್ದರು. [ವರದಿ: ಇಬ್ನು ಅಬ್ಬಾಸ್(ರ) - ಅಬೂದಾವೂದ್, ಇಬ್ನುಮಾಜಃ, ತಿರ್ಮಿದಿ]

## 6. ಸ್ವಪ್ನ ಸ್ಖಲನ

ಉಪವಾಸಿಗನಿಗೆ ದಿನದ ಹೊತ್ತು ಸ್ವಪ್ನ ಸ್ಖಲನವಾದರೆ ಉಪವಾಸ ವ್ರತ ಭಂಗ ವಾಗುವುದಿಲ್ಲ ಎಂಬುದು ಒಂದು ಸರ್ವಸಮ್ಮತ ವಿಧಿ.

## 7. ಜನಾಬತ್‌ನ ಸ್ಥಿತಿಯಲ್ಲಿ ಉಪವಾಸ ವ್ರತ ಆರಂಭಿಸುವುದು

ಸಂಸರ್ಗ ಅಥವಾ ಸ್ವಪ್ನ ಸ್ಖಲನದಿಂದಾದ ಜನಾಬತ್‌ನ ಸ್ಥಿತಿಯಲ್ಲಿ ಕಡ್ಡಾಯವಾಗಲಿ ಐಚ್ಛಿಕವಾಗಲೀ ಯಾವುದೇ ಉಪವಾಸ ವ್ರತವನ್ನು ಆರಂಭಿಸಬಹುದು.
[ತಹ್‌ದೀಬ್ ಇಬ್ನಿಲ್ ಕಯ್ಯಿಮ್ ಅಲಾ ಮುಅಲಿಮಿಸ್ಸುನನ್ ಭಾಗ - 3, ಪುಟ: 265]

ಇದೇ ರೀತಿ ಮುಟ್ಟಾದ ಮಹಿಳೆಗೆ ಅಥವಾ ಬಾಣಂತಿಗೆ ರಕ್ತಸ್ರಾವವು ರಾತ್ರಿಯ ಹೊತ್ತು ನಿಂತು ಹೋಗಿದ್ದರೆ, ಆಕೆ ಅದೇ ಸ್ಥಿತಿಯಲ್ಲಿ ಉಪವಾಸ ವ್ರತ ಆರಂಭಿಸಿ ಅನಂತರ ಸ್ನಾನ ಮಾಡಬಹುದು.

## 8. ಮರೆವಿನಿಂದ ತಿನ್ನುವುದು, ಕುಡಿಯುವುದು

ಮರೆವಿನಿಂದ ಏನಾದರೂ ತಿಂದರೆ ಅಥವಾ ಕುಡಿದರೆ ಉಪವಾಸ ವ್ರತ ಭಂಗವಾಗುವುದಿಲ್ಲ.

# ಉಪವಾಸ ವ್ರತ ಭಂಗವಾಗುವ ವಿಷಯಗಳು

ಉಪವಾಸ ಭಂಗವಾಗುವ ವಿಷಯಗಳ ಎರಡು ವಿಧಗಳಿವೆ.

1. ಅವುಗಳಿಂದ ಉಪವಾಸ ಭಂಗವಾಗುತ್ತದೆ ಮತ್ತು ಅದರ ಕಝಾ ಆಚರಿಸಿದರೆ ಸಾಕಾಗುತ್ತದೆ.

2. ಅವುಗಳಿಂದ ಉಪವಾಸ ಭಂಗವಾಗುತ್ತದೆ ಮತ್ತು ಅದರ ಕಝಾ ಮತ್ತು ಕಫ್ಫಾರ(ಪ್ರಾಯಶ್ಚಿತ್ತ) ಎರಡೂ ಕಡ್ಡಾಯವಾಗುತ್ತದೆ. ಅಂದರೆ ಒಂದು ದಿನದ ಉಪವಾಸ ವ್ರತದ ಬದಲಿಗೆ ಒಂದು ದಿನ ಉಪವಾಸದ ಕಝಾ ಆಚರಿಸುವುದರ ಜತೆಗೆ ಓರ್ವ ಗುಲಾಮನನ್ನು ವಿಮೋಚಿಸುವುದು, ಎರಡು ತಿಂಗಳ ನಿರಂತರ ಉಪವಾಸ ಆಚರಿಸುವುದು ಅಥವಾ ಅರವತ್ತು ಮಂದಿ ಬಡವರಿಗೆ ಆಹಾರ ನೀಡುವುದು ಕೂಡಾ ಕಡ್ಡಾಯವಾಗಿದೆ.

## 1. ಸಂಸರ್ಗ

ಒಬ್ಬನು ರಮಝಾನ್ ತಿಂಗಳ ಹಗಲಿನ ವೇಳೆ ಸಂಸರ್ಗ ನಡೆಸಿದರೆ ಅವನ ಉಪವಾಸ ವ್ರತ ಭಂಗವಾಗುತ್ತದೆ ಹಾಗೂ ಅವನ ಮೇಲೆ ಕಝಾ ಮತ್ತು ಕಫ್ಫಾರ ಗಳೆರಡೂ ಕಡ್ಡಾಯವಾಗುತ್ತದೆ. ಈ ವಿಷಯದಲ್ಲಿ ಹೆಚ್ಚಿನಂಶ ಒಮ್ಮತವಿದೆ.

ಒಬ್ಬರು ಪ್ರವಾದಿ(ಸ) ಅವರ ಬಳಿಗೆ ಬಂದು ಹೀಗೆ ಅರಿಕೆ ಮಾಡಿಕೊಂಡರು:

"ಓ ಅಲ್ಲಾಹನ ಸಂದೇಶವಾಹಕರೇ(ಸ)! ನಾನು ನಾಶವಾದೆ."

ಪ್ರವಾದಿ(ಸ): "ಏನಾಯಿತು? ನೀನೇಕೆ ನಾಶವಾದೆ?" ಎಂದು ವಿಚಾರಿಸಿದರು. ಆಗ ಅವರು "ನಾನು ರಮಝಾನ್‌ನಲ್ಲಿ ನನ್ನ ಪತ್ನಿಯೊಂದಿಗೆ ಸಂಸರ್ಗ ನಡೆಸಿಬಿಟ್ಟೆ" ಎಂದರು. ಆಗ ಪ್ರವಾದಿ(ಸ) "ನೀವು ಓರ್ವ ಗುಲಾಮನನ್ನು ವಿಮೋಚಿಸಬಲ್ಲಿರಾ?" ಎಂದು ಪ್ರಶ್ನಿಸಿದರು. ಆ ವ್ಯಕ್ತಿ ಇಲ್ಲವೆಂದಾಗ ಪ್ರವಾದಿ(ಸ), "ಎರಡು ತಿಂಗಳು ನಿರಂತರ ಉಪವಾಸ ವ್ರತ ಆಚರಿಸಬಲ್ಲಿರಾ?" ಎಂದು ಪ್ರಶ್ನಿಸಿದರು. ಅದಕ್ಕೆ ಅವರು ಇಲ್ಲವೆಂದಾಗ ಪ್ರವಾದಿ(ಸ), "ಹಾಗಾದರೆ ನೀವು 60 ಬಡವರಿಗೆ ಆಹಾರ ನೀಡಬಲ್ಲಿರಾ?" ಎಂದು ವಿಚಾರಿಸಿದರು. ಆ ವ್ಯಕ್ತಿ ಆಗಲೂ ಇಲ್ಲವೆಂದೇ ಉತ್ತರಿಸಿದರು. ಅನಂತರ ಆ ವ್ಯಕ್ತಿ ಸ್ವಲ್ಪ ಹೊತ್ತು ಪ್ರವಾದಿವರ್ಯರ(ಸ) ಬಳಿ ಕುಳಿತಿದ್ದರು. ಅಷ್ಟರಲ್ಲಿ ಪ್ರವಾದಿ(ಸ) ಅವರ ಬಳಿಗೆ ಬಂದು

ಚೀಲ ಉತ್ತುತ್ತೆ ಬಂತು. ಪ್ರವಾದಿ(ಸ) ಆ ವ್ಯಕ್ತಿಗೆ ಅದನ್ನು ನೀಡಿ, "ಈ ಉತ್ತುತ್ತೆಗಳನ್ನು ದಾನ ಮಾಡು" ಎಂದರು. ಆಗ ಆ ವ್ಯಕ್ತಿ, "ನನಗಿಂತಲೂ ಬಡನಾಗಿರುವವನಿಗೆ ನೀಡಬೇಕೇ? ಮದೀನಾದ ಇಕ್ಕೆಲಗಳಲ್ಲೂ ನನಗಿಂತ ಹೆಚ್ಚು ಬಡವನ ಮನೆ ಬೇರೆ ಇಲ್ಲ" ಎಂದರು. ಇದನ್ನು ಕೇಳಿ ಪ್ರವಾದಿ(ಸ) ನಕ್ಕು ಬಿಟ್ಟರು. ಎಲ್ಲಿಯವರೆಗೆಂದರೆ ಅವರ ಹಲ್ಲುಗಳು ಗೋಚರಿಸಿದುವು. "ಹೋಗು, ಅದನ್ನು ನಿನ್ನ ಮನೆಯವರಿಗೆ ತಿನ್ನಿಸು" ಎಂದು ಪ್ರವಾದಿ(ಸ) ಹೇಳಿದರು. [ವರದಿ: ಹ. ಅಬೂ ಹುರೈರಾ(ರ) - ಬುಖಾರಿ, ಮುಸ್ಲಿಮ್, ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ]

ಇಮಾಮ್ ಅಬೂ ಹನೀಫಾ(ರ) ಅವರ ಪ್ರಕಾರ ಈ ಕಫ್ಫಾರ ಸಂಸರ್ಗ ಮಾಡಿದ ಪತಿ ಪತ್ನಿಯರಿಬ್ಬರ ಮೇಲೂ ಕಡ್ಡಾಯವಾಗಿದೆ. ಒಂದು ವೇಳೆ ಪತಿಯು ಒತ್ತಾಯ ಪೂರ್ವಕ ಸಂಸರ್ಗ ನಡೆಸಿದ್ದರೆ ಆಗ ಆತ ಮಾತ್ರ ಕಫ್ಫಾರ ಕೊಟ್ಟರೆ ಸಾಕು. ಇಮಾಮ್ ಶಾಫೀಈ ಅವರ ಪ್ರಕಾರ ಕಫ್ಫಾರ ಕೇವಲ ಪತಿಯ ಮೇಲೆ ಕಡ್ಡಾಯವಾಗಿದೆ.

ಹೆಚ್ಚಿನ ಇಮಾಮರ ಅಭಿಪ್ರಾಯದಂತೆ ಗುಲಾಮ ವಿಮೋಚನೆ ಮಾಡಲು ಸಾಧ್ಯವಿದ್ದರೆ ಅದೇ ಅತ್ಯುತ್ತಮ. ಅದು ಸಾಧ್ಯವಿಲ್ಲದಾಗ ನಿರಂತರ ಎರಡು ತಿಂಗಳ ಉಪವಾಸ ವ್ರತ ಆಚರಿಸಬೇಕು. ಅದು ಸಾಧ್ಯವಿಲ್ಲದಾಗ 60 ಬಡವರಿಗೆ ಊಟ ನೀಡಬೇಕು.

[ಅಲ್ ಫತ್ಹುರ್ರಬ್ಬಾನೀ ಭಾಗ - 10, ಪುಟ: 97]

## 2. ವಾಂತಿ ಮಾಡುವುದು

ಉಪವಾಸ ವ್ರತದ ಸ್ಥಿತಿಯಲ್ಲಿ ಯಾರಾದರೂ ಉದ್ದೇಶಪೂರ್ವಕ ವಾಂತಿ ಮಾಡಿದರೆ ಆತನ ಉಪವಾಸ ಭಂಗವಾಗುತ್ತದೆ. ಆದರೆ ಆತನು ಕೇವಲ ಕಝಾ ಆಚರಿಸಿದರೆ ಸಾಕು. ಯಾರಿಗಾದರೂ ತಾನಾಗಿಯೇ ವಾಂತಿಯಾದರೆ ಮತ್ತು ಅವನದನ್ನು ನುಂಗದಿದ್ದರೆ ಅವನ ಉಪವಾಸ ಭಂಗವಾಗುವುದಿಲ್ಲ.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಯಾರಿಗೆ ತನ್ನಿಂತಾನೇ ವಾಂತಿಯಾಗುತ್ತದೋ (ಅವನ ಉಪವಾಸ ಭಂಗವಾಗುವುದಿಲ್ಲ) ಅವನ ಪಾಲಿಗೆ ಕಝಾ ಇಲ್ಲ. ಆದರೆ ಉದ್ದೇಶಪೂರ್ವಕ ವಾಂತಿ ಮಾಡಿದವನು (ಆತನ ಉಪವಾಸ ಭಂಗವಾಗುತ್ತದೆ) ಅದರ ಕಝಾ ಆಚರಿಸಬೇಕು. [ವರದಿ: ಹ.ಅಬೂ ಹುರೈರಾ(ರ) - ಅಹ್ಮದ್, ಅಬೂದಾವೂದ್, ತಿರ್ಮಿದಿ, ಇಬ್ನುಮಾಜಃ]

## 3. ಉದ್ದೇಶಪೂರ್ವಕ ತಿನ್ನುವುದು ಕುಡಿಯುವುದು

ಉದ್ದೇಶಪೂರ್ವಕ ತಿಂದರೆ ಅಥವಾ ಕುಡಿದರೆ ಉಪವಾಸ ವ್ರತ ಭಂಗವಾಗುತ್ತದೆ. ಏಕೆಂದರೆ ತಿನ್ನುವುದು ಕುಡಿಯುವುದನ್ನು ತೊರೆಯುವುದೇ ಉಪವಾಸ ವ್ರತದ ಒಂದು ಕಡ್ಡಾಯ ವಿಧಿಯಾಗಿದೆ. ಆದ್ದರಿಂದ ಯಾರಾದರೂ ಉಪವಾಸ ವ್ರತದ ಸ್ಥಿತಿಯಲ್ಲಿ ಉದ್ದೇಶಪೂರ್ವಕವಾಗಿ ತಿಂದರೆ ಅಥವಾ ಕುಡಿದರೆ ಅವನು ಅದರ ಕಝಾ ಆಚರಿಸಬೇಕು ಮತ್ತು ಕಫ್ಫಾರ

(ಪ್ರಾಯಶ್ಚಿತ್ತ) ನೀಡಬೇಕು. ಇದು ಇಮಾಮ್ ಅಬೂಹನೀಫಾ(ರ) ಅವರ ಅಭಿಮತ. ಇಮಾಮ್ ಶಾಫಿಈ(ರ) ಅವರ ಪ್ರಕಾರ ಆತ ಉಪವಾಸ ವ್ರತದ ಕಝಾ ಆಚರಿಸಿದರೆ ಸಾಕು. ಕಫ್ಫಾರ ನೀಡಬೇಕಾಗಿಲ್ಲ.

ಉಪವಾಸ ವ್ರತದ ಸ್ಥಿತಿಯಲ್ಲಿ ಮರೆವಿನಿಂದ ಏನಾದರೂ ತಿಂದರೆ ಅಥವಾ ಕುಡಿದರೆ ಉಪವಾಸ ಭಂಗವಾಗುವುದಿಲ್ಲ. ತಿಂದದ್ದು ಕುಡಿದದ್ದು, ಕಡಿಮೆಯಾದರೂ ಹೆಚ್ಚಾದರೂ ಕಡ್ಡಾಯ ಉಪವಾಸ ವ್ರತವಾದರೂ, ಐಚ್ಛಿಕವಾದರೂ ಸರಿಯೇ.

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಯಾರಾದರೂ ಉಪವಾಸ ವ್ರತದ ಸ್ಥಿತಿಯಲ್ಲಿ ಮರೆತು ತಿಂದರೆ, ಕುಡಿದರೆ(ಅವನ ಉಪವಾಸ ಭಂಗವಾಗುವುದಿಲ್ಲ) ಆತ ತನ್ನ ಉಪವಾಸ ವ್ರತವನ್ನು ಪೂರ್ಣಗೊಳಿಸಬೇಕು. ಏಕೆಂದರೆ ಅಲ್ಲಾಹನೇ ಅವನಿಗೆ ತಿನ್ನಿಸಿರುವನು, ಕುಡಿಸಿರುವನು. [ವರದಿ: ಹ. ಅಬೂಹುರೈರಾ(ರ)- ಬುಖಾರಿ, ಮುಸ್ಲಿಮ್, ಅಬೂ ದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ, ಅಹ್ಮದ್]

## 4. ಪ್ರಮಾದವಶಾತ್ ಸಮಯಕ್ಕೆ ಮುಂಚೆ ಇಫ್ತಾರ್ ಮಾಡುವುದು ಅಥವಾ ಫಜ್ರ್‌ನ ನಂತರ ತಿನ್ನುವುದು

ಇನ್ನೂ ಫಜ್ರ್ ಆಗಲಿಲ್ಲ ಎಂದು ಭಾವಿಸಿ ಯಾರಾದರೂ ಫಜ್ರ್‌ನ ಸಮಯ ಮೀರಿ ತಿನ್ನುತ್ತಲೇ ಇದ್ದು ಅನಂತರ ಅದು ಗೊತ್ತಾದರೆ ಅಥವಾ ಒಬ್ಬನು ಸೂರ್ಯಾಸ್ತಮಾನ ಆಗಿದೆಯೆಂದು ಭಾವಿಸಿ ಇಫ್ತಾರ್ ಮಾಡಿದ ಬಳಿಕ ಇನ್ನೂ ಸೂರ್ಯ ಮುಳುಗಿಲ್ಲವೆಂದು ಗೊತ್ತಾದರೆ ಅವನ ಉಪವಾಸ ವ್ರತ ಭಂಗವಾಗುತ್ತದೆ. ಆತ ಅನಂತರ ತನ್ನ ಆ ಉಪವಾಸ ವ್ರತದ ಕಝಾ ಆಚರಿಸಬೇಕು. ಏಕೆಂದರೆ ಪವಿತ್ರ ಕುರ್‌ಆನಿನ ಆಜ್ಞೆಯ ಪ್ರಕಾರ ಫಜ್ರ್ ಆಗುತ್ತಲೇ ತಿನ್ನುವುದನ್ನು ತೊರೆಯಬೇಕು ಮತ್ತು ಸೂರ್ಯನು ಮುಳುಗುವ ತನಕ ಅನ್ನ ಪಾನೀಯಗಳನ್ನು ವರ್ಜಿಸಬೇಕು. ಒಂದು ವೇಳೆ ಮರೆತರೆ ಅದು ಬೇರೆ ವಿಷಯ. ಏಕೆಂದರೆ ಮರೆವಿಗೆ ಕ್ಷಮೆಯಿದೆ. ಸೂರ್ಯಾಸ್ತಮಾನದ ಮತ್ತು ಫಜ್ರ್‌ನ ಕುರಿತು ಖಾತ್ರಿ ಮಾಡಿಕೊಳ್ಳದೆ ತಿನ್ನುವುದಕ್ಕೆ ಕುಡಿಯುವುದಕ್ಕೆ ಕ್ಷಮೆಯಿಲ್ಲ. ಅದರ ಕಝಾ ಸಂದಾಯ ಮಾಡಲೇ ಬೇಕು. ಇದುವೇ ಹನಫೀ, ಶಾಫಿಈ ಸಹಿತ ಎಲ್ಲ ಮದ್‌ಹಬ್‌ಗಳ ನಿಲುವಾಗಿದೆ.

## 5. ಋತುಸ್ರಾವ, ಹೆರಿಗೆ ಸ್ರಾವ

ಮಹಿಳೆಗೆ ದಿನದ ಯಾವುದೇ ಹೊತ್ತು ಋತುಸ್ರಾವ ಅಥವಾ ಹೆರಿಗೆಸ್ರಾವ ಆರಂಭವಾದರೆ ಆಕೆಯ ಉಪವಾಸ ವ್ರತ ಭಂಗವಾಗುತ್ತದೆ. ಆಕೆಯ ಮೇಲೆ ಆ ದಿನದ ಉಪವಾಸ ವ್ರತದ ಕಝಾ ಕಡ್ಡಾಯವಾಗುತ್ತದೆ.

[ಅಲ್ ಫಿಕ್‌ಹು ಅಲಲ್ ಮದಾಹಿಬಿಲ್ ಅರ್‌ಬಅ ಭಾಗ - 1, ಪುಟ: 547]

## 6. ಉಪವಾಸ ಮುರಿಯುವ ಸಂಕಲ್ಪ ಮಾಡುವುದು

ಉಪವಾಸ ವ್ರತ ಆಚರಿಸುತ್ತಿರುವಾಗ ಯಾರಾದರೂ ನಾನು ಉಪವಾಸ ಮುರಿದಿರುವೆನು ಎಂದು ಸಂಕಲ್ಪ ಮಾಡಿಕೊಂಡರೆ ಅವನ ಉಪವಾಸ ವ್ರತ ಭಂಗವಾಗುತ್ತದೆ. ಅವನ ಮೇಲೆ ಆ ದಿನದ ಕಝಾ ಕಡ್ಡಾಯವಾಗುತ್ತದೆ. ಏಕೆಂದರೆ ಉಪವಾಸ ವ್ರತಕ್ಕೆ ಸಂಕಲ್ಪ ಮುಖ್ಯ. ಸಂಕಲ್ಪವೇ ಇಲ್ಲದಾಗ ಉಪವಾಸವೂ ಭಂಗವಾಗುತ್ತದೆ.

## 7. ಆಹಾರವಲ್ಲದ ಯಾವುದೇ ವಸ್ತುವನ್ನು ನುಂಗುವುದು

ಬಾಯಿಯ ಮೂಲಕ ಹೊಟ್ಟೆಗೆ ಯಾವುದೇ ವಸ್ತುವನ್ನು ಇಳಿಸಿದರೂ - ಅದು ಆಹಾರವಲ್ಲದಿದ್ದರೂ ಸರಿಯೇ - ಉಪವಾಸ ವ್ರತ ಭಂಗವಾಗುತ್ತದೆ.

ಹೊಟ್ಟೆ, ತಲೆ ಅಥವಾ ಕಿವಿಯಲ್ಲಿ ಗಾಯವಿದ್ದು ಅದಕ್ಕೆ ಬಳಸಿದ ಮದ್ದು ಯಾವುದೇ ಮಾರ್ಗದ ಮೂಲಕ ಹೊಟ್ಟೆ ಅಥವಾ ಮಿದುಳಿಗೆ ತಲುಪಿದರೆ ಅದರಿಂದ ಉಪವಾಸ ವ್ರತ ಭಂಗವಾಗುತ್ತದೆ.

ಯಾವುದೇ ಕಾರಣಕ್ಕಾಗಿ ಒಬ್ಬನ ಉಪವಾಸ ವ್ರತ ಭಂಗವಾದರೆ ಆತ ರಮಝಾನ್‌ನ ಗೌರವಾರ್ಥವಾಗಿ ಹೊತ್ತು ಮುಳುಗುವ ತನಕ ಅನ್ನ-ಪಾನೀಯವನ್ನು ವರ್ಜಿಸಬೇಕು.

# ಲೈಲತುಲ್ ಕದ್ರ್

## ಮಹತ್ವ

ಲೈಲತುಲ್ ಕದ್ರ್ ಅಥವಾ ವಿಧಿ ನಿರ್ಣಾಯಕ ರಾತ್ರಿಯು ವರ್ಷದ ಇತರೆಲ್ಲ ರಾತ್ರಿಗಳಿಗಿಂತಲೂ ಹೆಚ್ಚು ಶ್ರೇಷ್ಠವಾಗಿದೆ.

ಅಲ್ಲಾಹನು ಈ ರೀತಿ ಹೇಳಿರುವನು:

"ನಾವು ಇದನ್ನು (ಕುರ್‌ಆನನ್ನು) ವಿಧಿ ನಿರ್ಣಾಯಕ ರಾತ್ರಿಯಲ್ಲಿ ಅವತೀರ್ಣಗೊಳಿಸಿರುತ್ತೇವೆ. ವಿಧಿ ನಿರ್ಣಾಯಕ ರಾತ್ರಿ ಏನೆಂದು ನಿಮಗೇನು ಗೊತ್ತು? ವಿಧಿ ನಿರ್ಣಾಯಕ ರಾತ್ರಿಯು ಸಾವಿರ ತಿಂಗಳುಗಳಿಗಿಂತ ಶ್ರೇಷ್ಠವಾಗಿದೆ."

ಪ್ರವಾದಿ(ಸ) ಈ ರೀತಿ ಹೇಳಿರುವರು:

"ಯಾರು ಸತ್ಯವಿಶ್ವಾಸ ಮತ್ತು ಪುಣ್ಯ ಗಳಿಸುವ ಸಂಕಲ್ಪದೊಂದಿಗೆ ಕದ್ರ್‌ನ ರಾತ್ರಿ (ವಿಧಿ ನಿರ್ಣಾಯಕ ರಾತ್ರಿ) ನಮಾಝ್ ಮಾಡಿದನೋ ಅವನ ಎಲ್ಲ ಗತ ಪಾಪಗಳೂ ಕ್ಷಮಿಸಲ್ಪಟ್ಟುವು." [ವರದಿ: ಹ. ಅಬೂ ಹುರೈರಾ(ರ) - ಬುಖಾರಿ, ಅಬೂದಾವೂದ್, ಅಹ್ಮದ್, ನಸಾಈ, ಇಬ್ನುಮಾಜಃ]

"ನಾನು ಪ್ರವಾದಿ(ಸ) ಅವರಲ್ಲಿ ಹೀಗೆ ವಿಚಾರಿಸಿದೆ: ಓ ಅಲ್ಲಾಹನ ಸಂದೇಶ ವಾಹಕರೇ(ಸ)! ನಾನು ವಿಧಿ ನಿರ್ಣಾಯಕ ರಾತ್ರಿಯನ್ನು ಪಡೆದರೆ ಹೇಗೆ ಪ್ರಾರ್ಥಿಸಬೇಕು?" ಪ್ರವಾದಿ(ಸ) ಹೇಳಿದರು: ನೀನು ಈ ರೀತಿ ಪ್ರಾರ್ಥಿಸು:

اَللّٰهُمَّ اِنَّكَ عَفُوٌّ تُحِبُّ الْعَفْوَ فَاعْفُ عَنِّىْ

(احمد، نسآء، ابن ماجه، ترمذی)

"ಅಲ್ಲಾಹುಮ್ಮ ಇನ್ನಕ ಅಫುವ್ವುನ್ ತುಹಿಬ್ಬುಲ್ ಅಫ್‌ವ ಫಅ್‌ಫು ಅನ್ನೀ."

ಓ ಅಲ್ಲಾಹ್! ನೀನು ಕ್ಷಮಾಶೀಲನು, ಕ್ಷಮೆಯು ನಿನಗೆ ಪ್ರಿಯವಾಗಿದೆ. ಆದ್ದರಿಂದ ನನ್ನನ್ನು ಕ್ಷಮಿಸು. [ವರದಿ: ಹ. ಆಯಿಶಾ(ರ)-ಅಹ್ಮದ್, ನಸಾಈ, ಇಬ್ನುಮಾಜಃ, ತಿರ್ಮಿದಿ]

## ಯಾವ ರಾತ್ರಿ?

ಲೈಲತುಲ್ ಕದ್ರ್ ಅನ್ನು ಯಾವ ರಾತ್ರಿಗಳಲ್ಲಿ ಹುಡುಕಬೇಕೆಂಬ ವಿಷಯದಲ್ಲಿ ಸಹಾಬಿಗಳು ಮತ್ತು ಇಮಾಮ್‌ಗಳ ಮಧ್ಯೆ ಭಿನ್ನಾಭಿಪ್ರಾಯವಿದೆ. ಹೆಚ್ಚಿನ ಹದೀಸ್‌ಗಳಿಂದ

ತಿಳಿದು ಬರುವ ಪ್ರಕಾರ ಮತ್ತು ಹೆಚ್ಚಿನ ವಿದ್ವಾಂಸರ ಅಭಿಪ್ರಾಯದಂತೆ ರಮಝಾನ್ ತಿಂಗಳ ಕೊನೆಯ ಹತ್ತು ದಿನಗಳ ಬೆಸಸಂಖ್ಯೆಯ ರಾತ್ರಿಗಳ ಪೈಕಿ ಒಂದು ರಾತ್ರಿ ಲೈಲತುಲ್ ಕದ್ರ್ ಆಗಿರಬೇಕು. ಹೆಚ್ಚಿನ ಇಮಾಮ್‌ಗಳ ಪ್ರಕಾರ ಅದು ಹೆಚ್ಚಿನಂಶ 27ನೇ ರಾತ್ರಿಯಾಗಿದೆ. ಇಮಾಮ್ ಶಾಫಿಈ(ರ) ಅವರ ಪ್ರಕಾರ ಅದು ಬಹುಶಃ 21ರ ರಾತ್ರಿಯಾಗಿದೆ.

# ಇಲ್‌ತಿಕಾಫ್ ಅಥವಾ ತಪಶ್ಚರ್ಯೆ

## 1. ಅರ್ಥ

'ಇಲ್‌ತಿಕಾಫ್' ಎಂಬ ಪದದ ಶಬ್ದಕೋಶಾರ್ಥ ತನ್ನನ್ನು ಯಾವುದಾದರೊಂದು ವಸ್ತುವಿನೊಂದಿಗೆ ಜೋಡಿಸುವುದು ಮತ್ತು ತಡೆದಿರಿಸುವುದಾಗಿದೆ. ಶರೀಅತ್‌ನಲ್ಲಿ 'ಇಲ್‌ತಿಕಾಫ್'ನ ಅರ್ಥ ನಿಯ್ಯತ್‌ನ ಸಹಿತ ಮಸೀದಿಯಲ್ಲೇ ತಂಗುವುದಾಗಿದೆ.

## 2. ಪುಣ್ಯ

ಪ್ರವಾದಿ(ಸ) ಹೀಗೆ ಹೇಳಿರುವರು:

ಮಸೀದಿಗಳಿಗೆ ಕೆಲವು ಗೂಟಗಳಿವೆ. (ಅರ್ಥಾತ್ ಮಸೀದಿಗಳಲ್ಲಿ ಕುಳಿತು ಆರಾಧನೆ ಗಳಲ್ಲೇ ತಲ್ಲೀನರಾಗಿರುವುದನ್ನು ಇಷ್ಟಪಡುವ ಜನರು) ಇಂತಹ ಜನರ ಸಂಗಾತಿ ಮಲಕ್ ಗಳಾಗಿದ್ದಾರೆ. ಅವರು ಒಂದು ವೇಳೆ ಮಸೀದಿಯಲ್ಲಿಲ್ಲದಿದ್ದರೆ ಮಲಕ್‌ಗಳು ಅವರನ್ನು ಹುಡುಕುತ್ತಾರೆ. ಅವರು ಕಾಯಿಲೆ ಬಿದ್ದರೆ ಅವರನ್ನು ಸಂದರ್ಶಿಸುತ್ತಾರೆ ಮತ್ತು ಅವರಿಗೇನಾದರೂ ಅವಶ್ಯಕತೆ ಇದ್ದರೆ ಅದನ್ನು ಪೂರೈಸುವಲ್ಲಿ ಅವರಿಗೆ ನೆರವಾಗುತ್ತಾರೆ.

[ವರದಿ: ಹ. ಅಬೂ ಹುರೈರಾ(ರ) - ಅಹ್ಮದ್]

ಪ್ರವಾದಿ(ಸ) ರಮಝಾನ್ ತಿಂಗಳ ಕೊನೆಯ ಹತ್ತು ದಿನಗಳಲ್ಲಿ ಪ್ರತಿ ವರ್ಷ ಮಸೀದಿಯಲ್ಲಿ ಇಲ್‌ತಿಕಾಫ್ ಮಾಡುತ್ತಿದ್ದರು. ಸಹಾಬಿಗಳು ಮತ್ತು ಪ್ರವಾದಿ ಪತ್ನಿಯರು(ರ) ಕೂಡಾ ಇಲ್‌ತಿಕಾಫ್ ಆಚರಿಸುತ್ತಿದ್ದರು.

## 3. ಸಮಯ

ಇಲ್‌ತಿಕಾಫ್‌ಗೆ ಯಾವುದೇ ನಿಶ್ಚಿತ ಸಮಯವಿಲ್ಲ. ಯಾವ ಸಮಯದಲ್ಲಿ ಎಷ್ಟು ಅವಧಿಗೆ-ಬೇಕಾದರೂ ಇಲ್‌ತಿಕಾಫ್ ಮಾಡಬಹುದಾಗಿದೆ. ಆದರೆ ರಮಝಾನ್‌ನ ಕೊನೆಯ ಹತ್ತು ದಿನಗಳಲ್ಲಿ ಅಂದರೆ ರಮಝಾನ್ 20ರ ಮಗ್ರಿಬ್‌ನಿಂದ ಈದುಲ್ ಫಿತ್ರ್‌ನ ಚಂದ್ರ ದರ್ಶನವಾಗುವ ತನಕ ಇಲ್‌ತಿಕಾಫ್ ಮಾಡುವುದು ಸುನ್ನತ್ ಆಗಿದೆ.

"ಪ್ರವಾದಿ(ಸ) ರಮಝಾನ್‌ನ ಕೊನೆಯ ಹತ್ತು ದಿನಗಳಲ್ಲಿ ಇಲ್‌ತಿಕಾಫ್ ಮಾಡುತ್ತಿದ್ದರು. ಅವರು ತಮ್ಮ ಪ್ರಭುವನ್ನು ಭೇಟಿಯಾಗುವ ತನಕ."

[ವರದಿ: ಹ.ಅಬೂ ಹುರೈರಾ(ರ) - ಬುಖಾರಿ, ಮುಸ್ಲಿಮ್, ಅಬೂದಾವೂದ್, ನಸಾಈ, ಅಹ್ಮದ್]

## 4. ಇಅ್‌ತಿಕಾಫ್‌ನ ಅಗತ್ಯಗಳು

**i) ನಿಯ್ಯತ್:**

ಇಅ್‌ತಿಕಾಫ್‌ಗೆ ನಿಯ್ಯತ್ ಅಗತ್ಯವೆಂಬುದು ಒಂದು ಸರ್ವಸಮ್ಮತ ವಿಧಿ.

**ii) ಮಸೀದಿ:**

ಇಮಾಮ್ ಶಾಫಿಈ(ರ) ಸೇರಿದಂತೆ ಹೆಚ್ಚಿನ ಇಮಾಮ್‌ಗಳ ಅಭಿಪ್ರಾಯದಂತೆ ಸ್ತ್ರೀಯಾಗಲೀ ಪುರುಷನಾಗಲೀ ಇಅ್‌ತಿಕಾಫ್ ಮಾಡುವುದಾದರೆ ಅದು ಮಸೀದಿಯಲ್ಲಾಗುವುದು ಕಡ್ಡಾಯವಾಗಿದೆ. ಮನೆಯಲ್ಲಿ ಅಥವಾ ಇತರ ಯಾವುದೇ ಕಡೆ ಇಅ್‌ತಿಕಾಫ್ ಆಗುವುದಿಲ್ಲ. ಏಕೆಂದರೆ ಅಲ್ಲಾಹನು ಈ ರೀತಿ ಹೇಳಿರುವನು:

"ನೀವು ಮಸೀದಿಯಲ್ಲಿ ಇಅ್‌ತಿಕಾಫ್ ಮಾಡುತ್ತಿರುವಾಗ ಪತ್ನಿಯರೊಂದಿಗೆ ಸಂಸರ್ಗ ನಡೆಸಬೇಡಿರಿ." (ಪವಿತ್ರ ಕುರ್‌ಆನ್, 2:187)

ಪ್ರವಾದಿ(ಸ) ಇಅ್‌ತಿಕಾಫ್ ಮಾಡುತ್ತಿರುವಾಗ ಮಸೀದಿಯಿಂದಲೇ ತಮ್ಮ ತಲೆಯನ್ನು ನನ್ನ ಕಡೆಗೆ ಚಾಚುತ್ತಿದ್ದರು. ನಾನು ಅದನ್ನು ಬಾಚುತ್ತಿದ್ದೆ. ಅವರು ಇಅ್‌ತಿಕಾಫ್‌ನಲ್ಲಿರುವಾಗ ಅನಿವಾರ್ಯ ದೈಹಿಕ ಬೇಡಿಕೆ(ಮಲ-ಮೂತ್ರ ವಿಸರ್ಜನೆ)ಯಿಲ್ಲದೆ ಮನೆಗೆ ಪ್ರವೇಶಿಸುತ್ತಿರಲಿಲ್ಲ. ಅವರಿಗೆ ವುಝೂ ಮಾಡಲಿಕ್ಕಿದ್ದಾಗ ಹೊರತು. [ವರದಿ: ಹ. ಆಯಿಶಾ(ರ) - ಬುಖಾರಿ, ಮುಸ್ಲಿಮ್, ಅಬೂದಾವೂದ್, ತಿರ್ಮಿದಿ, ಇಬ್ನುಮಾಜಃ, ನಸಾಈ]

ಇತರ ಹದೀಸ್‌ಗಳಿಂದ ತಿಳಿದು ಬರುವಂತೆ ಪ್ರವಾದಿ(ಸ) ಅವರ ಪತ್ನಿಯರು ಮತ್ತು ಸಹಾಬಿಗಳು ಎಷ್ಟೇ ಕಷ್ಟವಾದರೂ ಮಸೀದಿಯಲ್ಲೇ 'ಇಅ್‌ತಿಕಾಫ್' ಮಾಡುತ್ತಿದ್ದರು.

ಇಮಾಮ್ ಅಬೂ ಹನೀಫಾ(ರ) ಅವರ ಪ್ರಕಾರ ಇಅ್‌ತಿಕಾಫ್‌ಗೆ ಮಸೀದಿಯಾಗಬೇಕೆಂದಿರುವುದು ಕೇವಲ ಪುರುಷರಿಗಾಗಿದೆ. ಸ್ತ್ರೀ ತನ್ನ ಮನೆಯ ಮಸೀದಿಯಲ್ಲೇ (ಮನೆಯಲ್ಲಿ ಆಕೆ ಸಾಮಾನ್ಯವಾಗಿ ನಮಾಝ್ ಮಾಡುವ ಸ್ಥಳ) ಇಅ್‌ತಿಕಾಫ್ ಮಾಡಬೇಕು. ಏಕೆಂದರೆ ಅದುವೇ ಅವಳ ಪಾಲಿಗೆ ಮಸೀದಿಯಾಗಿದೆ. ಆ ಜಾಗದಲ್ಲೇ ಕುಳಿತಿರುವುದ ರಿಂದ ಇಅ್‌ತಿಕಾಫ್‌ನ ಉದ್ದೇಶವು ಈಡೇರುತ್ತದೆ. ಆಕೆಯ ಮನೆಯಲ್ಲಿ ಮಸೀದಿಯಿಲ್ಲ ದಿದ್ದರೆ ಆಕೆ ಯಾವುದಾದರೂ ಜಾಗವನ್ನು ನಿಶ್ಚಯಿಸಿ ಅಲ್ಲೇ ಇಅ್‌ತಿಕಾಫ್ ಮಾಡಬೇಕು.

[ಹಿದಾಯಃ ಭಾಗ - 1, ಪುಟ: 95]

ಇಮಾಮ್ ಶಾಫಿಈ(ರ) ಸಹಿತ ಹೆಚ್ಚಿನ ಇಮಾಮ್‌ಗಳ ಪ್ರಕಾರ ಇಅ್‌ತಿಕಾಫ್ ಯಾವುದೇ ಮಸೀದಿಯಲ್ಲಾಗಬಹುದು. ಆದರೆ ಇಮಾಮ್ ಅಬೂಹನೀಫಾ(ರ) ಅವರ ಪ್ರಕಾರ ಎಲ್ಲ ನಮಾಝ್‌ಗಳೂ ನಿರ್ವಹಿಸಲ್ಪಡುವ ಮಸೀದಿಯಲ್ಲಿ ಮಾತ್ರ ಇಅ್‌ತಿಕಾಫ್ ಆಗಬೇಕು.

**iii) ಉಪವಾಸ ವ್ರತ:**

ಇಮಾಮ್ ಅಬೂಹನೀಫಾ(ರ) ಸಹಿತ ಹೆಚ್ಚಿನ ಇಮಾಮರ ಅಭಿಪ್ರಾಯದಂತೆ ಇಅ್‌ತಿಕಾಫ್‌ಗೆ ಉಪವಾಸ ವ್ರತ ಅಗತ್ಯ. ಉಪವಾಸವ್ರತವಿಲ್ಲದಿದ್ದರೆ ಇಅ್‌ತಿಕಾಫ್

ಆಗುವುದಿಲ್ಲ. ಏಕೆಂದರೆ ಪ್ರವಾದಿ(ಸ) ಅವರು ಉಪವಾಸದ ಹೊರತು ಇಲ್‌ತಿಕಾಫ್ ಮಾಡಿದ ದೃಷ್ಟಾಂತಗಳಿಲ್ಲ.

ಅಲ್ಲಾಹನು ಇಲ್‌ತಿಕಾಫ್‌ನ ಪ್ರಸ್ತಾಪವನ್ನು ಉಪವಾಸ ವ್ರತದ ಜತೆಗೇ ಮಾಡಿರುವನು.

ಹ. ಆಯಿಶಾ(ರ) ಹೀಗೆ ಹೇಳಿರುವರು, "ಉಪವಾಸ ವ್ರತದ ಹೊರತು ಇಲ್‌ತಿಕಾಫ್ ಇಲ್ಲ ಎಂಬುದೇ ಸುನ್ನತ್ ಆಗಿದೆ." [ಅಬೂದಾವೂದ್]

ಇಮಾಮ್ ಶಾಫಿಈ(ರ) ಅವರ ಪ್ರಕಾರ ಇಲ್‌ತಿಕಾಫ್‌ಗೆ ಉಪವಾಸ ವ್ರತ ಬೇಕೆಂದಿಲ್ಲ. ಅವರು ಈ ಕೆಳಗಿನ ಹದೀಸನ್ನು ಅದಕ್ಕೆ ಆಧಾರವಾಗಿ ಮುಂದಿರಿಸುತ್ತಾರೆ:

ಹ. ಉಮರ್(ರ) ಪ್ರವಾದಿವರ್ಯರಲ್ಲಿ(ಸ) ಹೀಗೆ ಪ್ರಶ್ನಿಸಿದರು: "ನಾನು ಒಂದು ರಾತ್ರಿ ಮಸ್ಜಿದುಲ್ ಹರಾಮ್‌ನಲ್ಲಿ ಇಲ್‌ತಿಕಾಫ್ ಮಾಡುವುದಾಗಿ ಅಜ್ಞಾನ ಕಾಲದಲ್ಲಿ ಹರಕೆ ಹೊತ್ತಿದ್ದೆ" ಪ್ರವಾದಿ(ಸ) ಹೇಳಿದರು: "ನಿಮ್ಮ ಹರಕೆಯನ್ನು ಪೂರ್ತಿಗೊಳಿಸಿ."

[ವರದಿ: ಹ. ಅಬ್ದುಲ್ಲಾ ಬಿನ್ ಉಮರ್(ರ) - ಬುಖಾರಿ, ಮುಸ್ಲಿಮ್]

ರಾತ್ರಿ ಉಪವಾಸ ವ್ರತ ಆಚರಿಸುವ ಪ್ರಶ್ನೆಯಿಲ್ಲ. ಆದ್ದರಿಂದ ಉಪವಾಸ ವ್ರತವಿಲ್ಲದೆಯೇ ಇಲ್‌ತಿಕಾಫ್ ಮಾಡಬಹುದೆಂದು ಈ ಹದೀಸ್‌ನಿಂದ ತಿಳಿದು ಬರುತ್ತದೆ.

## 5. ಇಲ್‌ತಿಕಾಫ್‌ನಲ್ಲಿ ಮಾಡಬೇಕಾದ ಕಾರ್ಯಗಳು

ಇಲ್‌ತಿಕಾಫ್‌ನಲ್ಲಿ ನಫಿಲ್ ನಮಾಝ್, ಕುರ್‌ಆನ್ ಪಠಣ, ಅಲ್ಲಾಹನ ದಿಕ್ರ್, ಸುಬ್‌ಹಾನಲ್ಲಾಹ್, ಅಲ್‌ಹಮ್ದುಲಿಲ್ಲಾಹ್, ಅಲ್ಲಾಹು ಅಕ್ಬರ್ ಎಂದು ಹೇಳುವುದು, ಇಸ್ತಿಗ್‌ಫಾರ್ ಮಾಡುವುದು ಮತ್ತು ಪ್ರವಾದಿ(ಸ) ಅವರ ಮೇಲೆ ಸಲಾತ್ ಹೇಳುತ್ತಿರುವುದು ಉತ್ತಮವಾಗಿದೆ. ಈ ಬಗ್ಗೆ ಎಲ್ಲ ಇಮಾಮರಿಗೆ ಒಮ್ಮತವಿದೆ. ಇಮಾಮ್ ಅಬೂ ಹನೀಫಾ(ರ) ಮತ್ತು ಇಮಾಮ್ ಶಾಫಿಈ(ರ) ಅವರ ಪ್ರಕಾರ ಹದೀಸ್ ಮತ್ತು ಫಿಕ್ಹ್ ಗ್ರಂಥಗಳನ್ನು ಪಠಿಸುವುದು ಕೂಡಾ ಉತ್ತಮವಾಗಿದೆ.

[ಅಲ್‌ಫತ್‌ಹುರ್ರಬ್ಬಾನೀ ಭಾಗ - 1, ಪುಟ: 258]

## 6. 'ಇಲ್‌ತಿಕಾಫ್'ನಲ್ಲಿ ಅನಪೇಕ್ಷಿತ ಕಾರ್ಯಗಳು

**i) ನಿರರ್ಥಕ ಮಾತು ಅಥವಾ ಕೃತಿಯಲ್ಲಿ ತೊಡಗಿರುವುದು:**

ಪ್ರವಾದಿ(ಸ) ಹೀಗೆ ಹೇಳಿರುವರು:

ಒಬ್ಬ ವ್ಯಕ್ತಿಯ "ಇಸ್ಲಾಮ್" ಒಳ್ಳೆಯದಾಗಬೇಕಾದರೆ ಅವನು ಎಲ್ಲ ನಿರರ್ಥಕ ಮಾತು ಕೃತಿಗಳಿಂದ ದೂರವಿರಬೇಕು.

[ವರದಿ: ಹ.ಅಬೂ ಬಸ್ರಾ(ರ) - ತಿರ್ಮಿದಿ, ಇಬ್ನುಮಾಜಃ]

**ii) ಪುಣ್ಯವೆಂದು ಭಾವಿಸಿ ಮೌನವಾಗಿರುವುದು:**

ಪ್ರವಾದಿ(ಸ) ಪ್ರವಚನ ನೀಡುತ್ತಿದ್ದರು. ಅಷ್ಟರಲ್ಲಿ ಒಬ್ಬನು ನಿಂತುಕೊಂಡದ್ದು ಕಾಣಿಸಿತು. ಪ್ರವಾದಿ(ಸ) ಆ ವ್ಯಕ್ತಿಯ ಕುರಿತು ವಿಚಾರಿಸಿದರು. ಜನರು "ಅವನ ಹೆಸರು

ಅಬೂ ಇಸ್ರಾಈಲ್ ಆಗಿದೆ. ಅವನು ನಿಂತುಕೊಂಡೇ ಇರುವೆನು, ಕುಳಿತುಕೊಳ್ಳಲಾರೆ, ನೆರಳಿಗೆ ಹೋಗಲಾರೆ, ಮಾತಾಡಲಾರೆ ಮತ್ತು ಉಪವಾಸ ವ್ರತ ಆಚರಿಸುವೆ ಎಂದು ಹರಕೆ ಹೊತ್ತಿರುವನು" ಎಂದರು. ಪ್ರವಾದಿ(ಸ) ಹೇಳಿದರು: "ಅವನಿಗೆ ಹೇಳಿರಿ. ಅವನು ಮಾತಾಡಲಿ, ಕುಳಿತುಕೊಳ್ಳಲಿ ಮತ್ತು ತನ್ನ ಉಪವಾಸ ವ್ರತವನ್ನು ಕೊನೆಗೊಳಿಸಲಿ."

[ವರದಿ: ಹ. ಇಬ್ನು ಅಬ್ಬಾಸ್(ರ) - ಬುಖಾರಿ, ಅಬೂದಾವೂದ್, ಇಬ್ನುಮಾಜಃ]

## 7. 'ಇಅ್ತಿಕಾಫ್'ನಲ್ಲಿ ಧರ್ಮ ಸಮ್ಮತ ಮತ್ತು ನಿಷಿದ್ಧ ಕಾರ್ಯಗಳು

**(i)** 'ಇಅ್ತಿಕಾಫ್'ನಲ್ಲಿರುವಾಗ ಪತ್ನಿಯಿಂದ ತಲೆ ತೊಳೆಯಿಸುವುದು, ಬಾಚಿಸುವುದು ಮತ್ತು ಅದಕ್ಕಾಗಿ ತಲೆಯನ್ನು ಮಸೀದಿಯಿಂದ ಹೊರಗೆ ಚಾಚುವುದು ಧರ್ಮ ಸಮ್ಮತವಾಗಿದೆ.

"ಪ್ರವಾದಿ(ಸ) ಇಅ್ತಿಕಾಫ್‌ನಲ್ಲಿರುವಾಗ ನನ್ನ ಕಡೆಗೆ ತಮ್ಮ ತಲೆಯನ್ನು ಚಾಚುತ್ತಿದ್ದರು. ನಾನು ಅವರ ತಲೆಯನ್ನು ತೊಳೆಯುತ್ತಿದ್ದೆ. ವಸ್ತುತಃ ನಾನು ಆಗ ಮುಟ್ಟಾದ ಸ್ಥಿತಿಯಲ್ಲಿರುತ್ತಿದ್ದೆ." [ವರದಿ: ಹ. ಆಯಿಶಾ(ರ) - ಬುಖಾರಿ, ಮುಸ್ಲಿಮ್, ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನುಮಾಜಃ, ಅಹ್ಮದ್]

**(ii)** ಇಅ್ತಿಕಾಫ್‌ನಲ್ಲಿರುವಾಗ ಮನೆಯವರು ಯಾರಾದರೂ ಭೇಟಿಯಾಗಲು ಬಂದರೆ ಅವರನ್ನು ಬೀಳ್ಕೊಡಲಿಕ್ಕಾಗಿ ಇಅ್ತಿಕಾಫ್‌ನ ಸ್ಥಳದಿಂದ ಹೊರಗೆ ಹೋಗ ಬಹುದಾಗಿದೆ.

ಪ್ರವಾದಿ(ಸ) ಇಅ್ತಿಕಾಫ್‌ನಲ್ಲಿರುವಾಗ ಒಂದು ರಾತ್ರಿ ನಾನು ಅವರನ್ನು ಭೇಟಿಯಾಗಲು ಹೋದೆ. ನಾನು ಅವರೊಡನೆ ಮಾತನಾಡಿ ಮರಳಿ ಎದ್ದು ನಿಂತಾಗ ಪ್ರವಾದಿ(ಸ) ನನ್ನನ್ನು ಬೀಳ್ಕೊಡಲಿಕ್ಕಾಗಿ ಎದ್ದು ನಿಂತರು. [ವರದಿ: ಉಮ್ಮುಲ್ ಮೂಮಿನೀನ್ ಹ. ಸಫಿಯ್ಯ(ರ) - ಬುಖಾರಿ, ಮುಸ್ಲಿಮ್, ಅಬೂದಾವೂದ್]

**(iii)** ಇಅ್ತಿಕಾಫ್‌ನಲ್ಲಿರುವವನು ಮಸೀದಿಯಲ್ಲಿ ತನಗಾಗಿ ಒಂದು ಸ್ಥಳವನ್ನು ನಿಶ್ಚಯಿಸಿಕೊಂಡು ಅಲ್ಲಿ ಪರ್ದಾ ಹಾಕಬಹುದು. ಇದರಿಂದ ಅವನಿಗೆ ಏಕಾಂತತೆ ಪ್ರಾಪ್ತವಾದೀತು. ಆದರೆ ಇದರಿಂದ ಮಸೀದಿಯ ಸ್ಥಳಾವಕಾಶ ಕಡಿಮೆಯಾಗಿ ನಮಾಝ್ ಮಾಡುವವನಿಗೆ ತೊಂದರೆಯಾಗಬಾರದು.

ಪ್ರವಾದಿ(ಸ) ಇಅ್ತಿಕಾಫ್ ಮಾಡುವಾಗ ತೌಬಾದ ಕಂಬ*ದ ಬಳಿ ಅವರ ಹಾಸಿಗೆಯನ್ನು ಹಾಸಲಾಗುತ್ತಿತ್ತು ಅಥವಾ ಮಂಚವನ್ನು ಇಡಲಾಗುತ್ತಿತ್ತು.

[ವರದಿ: ಹ. ಇಬ್ನು ಉಮರ್(ರ) - ಇಬ್ನುಮಾಜಃ]

ಪ್ರವಾದಿ(ಸ) ಒಂದು ಟರ್ಕಿ ಡೇರೆಯಲ್ಲಿ ಇಅ್ತಿಕಾಫ್ ಮಾಡಿದರು. ಅದರ ಒಂದು ದ್ವಾರದಲ್ಲಿ ಚಾಪೆಯ ಒಂದು ಪರದೆಯಿತ್ತು.

[ವರದಿ: ಹ. ಅಬೂಸಈದ್ ಖುದ್ರೀ(ರ) - ಇಬ್ನುಮಾಜಃ]

---

*ಇದು ಮಸ್ಜಿದುನ್ನಬವಿಯ ಒಂದು ಕಂಬದ ಹೆಸರು. ಒಬ್ಬರು ತಮ್ಮನ್ನು ಈ ಕಂಬಕ್ಕೆ ಕಟ್ಟಿ ಹಾಕಿದ್ದರು. ಅಲ್ಲಾಹನು ಅವರ ತೌಬಾ(ಪಶ್ಚಾತ್ತಾಪ)ವನ್ನು ಸ್ವೀಕರಿಸುವ ತನಕವೂ ಅವರು ಅದೇ ಸ್ಥಿತಿಯಲ್ಲಿದ್ದರು. ಅದರಿಂದಾಗಿ ಅದಕ್ಕೆ ತೌಬಾದ ಕಂಬವೆಂಬ ಹೆಸರು ಬಂತು.

**(iv)** ಇಅ್‌ತಿಕಾಫ್ ಮಾಡುವವನು ಮಲ-ಮೂತ್ರ ವಿಸರ್ಜನೆಗಾಗಿ ಮಸೀದಿಯಿಂದ ಹೊರಗೆ ಹೋಗಬಹುದು ಮತ್ತು ತನ್ನ ಮನೆಯನ್ನು ಪ್ರವೇಶಿಸಬಹುದು.

ಇಮಾಮ್ ಅಬೂ ಹನೀಫಾ(ರ) ಅವರ ಪ್ರಕಾರ ರೋಗಿಯ ಸಂದರ್ಶನ ಮತ್ತು ಮರಣ ಯಾತ್ರೆಯಲ್ಲಿ ಭಾಗವಹಿಸಲಿಕ್ಕಾಗಿ ಇಅ್‌ತಿಕಾಫ್‌ನಲ್ಲಿರುವವನು ಮಸೀದಿಯಿಂದ ಹೊರಗೆ ಹೋಗಬಹುದು.

ಇಮಾಮ್ ಶಾಫಿಈ(ರ) ಅವರ ಪ್ರಕಾರ ಆ ಕಾರ್ಯಗಳಿಗೆ ಮೊದಲೇ ಅವನು ನಿಯ್ಯತ್ ಮಾಡಿದ್ದರೆ ಮಾತ್ರ ಮಸೀದಿಯಿಂದ ಹೊರಹೋಗಬಹುದು.

**(v)** ಒಂದು ವೇಳೆ ಒಬ್ಬ ವ್ಯಕ್ತಿಯು ಜುಮಾ ನಮಾಝ್ ನಡೆಯದ ಮಸೀದಿಯಲ್ಲಿ ಇಅ್‌ತಿಕಾಫ್ ಮಾಡುತ್ತಿದ್ದರೆ ಆತ ಜುಮಾ ನಮಾಝ್‌ನಲ್ಲಿ ಭಾಗವಹಿಸಲಿಕ್ಕಾಗಿ ಮಸೀದಿಯಿಂದ ಹೊರಗೆ ಹೋಗಬೇಕು. ಆಗ ಅವನ ಇಅ್‌ತಿಕಾಫ್ ಭಂಗವಾಗುವುದಿಲ್ಲ ವೆಂಬುದು ಇಮಾಮ್ ಅಬೂ ಹನೀಫಾ(ರ) ಅವರ ಅಭಿಪ್ರಾಯ. ಆದರೆ ಇಮಾಮ್ ಶಾಫಿಈ(ರ) ಅವರ ಪ್ರಕಾರ ಆತನ ಇಅ್‌ತಿಕಾಫ್ ಕೊನೆಗೊಳ್ಳುತ್ತದೆ.

**(vi)** ಇಅ್‌ತಿಕಾಫ್‌ನಲ್ಲಿರುವಾಗ ಪತ್ನಿಯೊಂದಿಗೆ ಸಹಶಯನ ನಡೆಸುವುದು ನಿಷಿದ್ಧವಾಗಿದೆ. ಅಲ್ಲಾಹನು ಹೀಗೆ ಹೇಳಿರುವನು:

"ನೀವು ಮಸೀದಿಯಲ್ಲಿ ಇಅ್‌ತಿಕಾಫ್ ಮಾಡುತ್ತಿರುವಾಗ ನಿಮ್ಮ ಪತ್ನಿಯರೊಂದಿಗೆ ಸಹಶಯನ ನಡೆಸಬೇಡಿರಿ."

**(vii)** ಇಅ್‌ತಿಕಾಫ್‌ನಲ್ಲಿರುವಾಗ ಯಾವುದೇ ರೀತಿಯ ವ್ಯಾಪಾರ ವ್ಯವಹಾರಗಳು ನಿಷಿದ್ಧವಾಗಿದೆ.

## 8. ಇಅ್‌ತಿಕಾಫ್‌ನ ಕಝಾ

ಇಅ್‌ತಿಕಾಫ್ ಮಾಡಿದವನು ಅದನ್ನು ಪೂರ್ಣಗೊಳಿಸದೆ ಮಧ್ಯದಲ್ಲಿ ತೊರೆದರೆ ಅವನ ಮೇಲೆ ಅದರ ಕಝಾ ಕಡ್ಡಾಯವಾಗಿದೆಯೆಂಬುದು ಇಮಾಮ್ ಅಬೂಹನೀಫಾ(ರ) ಅವರ ಅಭಿಮತ. ಅವರಿಗೆ ಈ ಕೆಳಗಿನ ಹದೀಸ್ ಆಧಾರವಾಗಿದೆ:

ಪ್ರವಾದಿ(ಸ) ರಮಝಾನ್‌ನಲ್ಲಿ ಇಅ್‌ತಿಕಾಫ್ ಆರಂಭಿಸಿದರು. ಆದರೆ ನಂತರ ಅವರು ಅದರಿಂದ ಹೊರಬಂದರು. ತರುವಾಯ ಶವ್ವಾಲ್ ತಿಂಗಳಲ್ಲಿ ಪ್ರವಾದಿ(ಸ) ಹತ್ತು ದಿನ ಇಅ್‌ತಿಕಾಫ್ ಮಾಡಿದರು. [ವರದಿ: ಹ. ಆಯಿಶಾ(ರ) - ಬುಖಾರಿ, ಮುಸ್ಲಿಮ್, ಅಬೂದಾವೂದ್]

ಇಮಾಮ್ ಶಾಫಿಈ(ರ) ಅವರ ಪ್ರಕಾರ ಇಅ್‌ತಿಕಾಫ್‌ನ ಕಝಾ ಕಡ್ಡಾಯವಲ್ಲ. ಏಕೆಂದರೆ ಪ್ರವಾದಿ ಪತ್ನಿಯರು ಕೂಡಾ ಇಅ್‌ತಿಕಾಫನ್ನು ಮಧ್ಯದಲ್ಲಿ ತೊರೆದಿದ್ದರು. ಆದರೆ ಪ್ರವಾದಿ(ಸ) ಅವರಿಗೆ ಅದರ ಕಝಾ ಆಚರಿಸುವಂತೆ ಆದೇಶಿಸಿರಲಿಲ್ಲ.

## 9. ಮಹಿಳೆಯರ ಇಲ್‌ತಿಕಾಫ್

(i) ಮಹಿಳೆಯು ಇಲ್‌ತಿಕಾಫ್ ಮಾಡುವಾಗ ಪತಿಯ ಅನುಮತಿ ಪಡೆದಿರಬೇಕು. ಅವನ ಅನುಮತಿಯಿಲ್ಲದೆ ಇಲ್‌ತಿಕಾಫ್ ಆರಂಭಿಸಿದರೆ ಅವನು ಅದನ್ನು ತಡೆಯ ಬಹುದಾಗಿದೆ. ಹೆಚ್ಚಿನ ಇಮಾಮರ ಅಭಿಪ್ರಾಯದಂತೆ ಅವನು ಅನುಮತಿ ನೀಡಿದ ಬಳಿಕವೂ ಅದನ್ನು ಹಿಂತೆಗೆದುಕೊಳ್ಳಬಹುದಾಗಿದೆ. ಆದರೆ ಹನಫೀ ಮದ್‌ಹಬ್ ಪ್ರಕಾರ ಹಾಗೆ ಹಿಂತೆಗೆದುಕೊಳ್ಳುವುದು ಪಾಪವಾಗಿದೆ.

(ii) ಮಹಿಳೆಯು ಮುಟ್ಟಾದ ಸ್ಥಿತಿಯಲ್ಲಿ ಇಲ್‌ತಿಕಾಫ್ ಮಾಡುವಂತಿಲ್ಲ. ಆದರೆ ಅನಾರೋಗ್ಯದಿಂದ ಆಗುವ ರಕ್ತಸ್ರಾವದ ಅವಧಿಯಲ್ಲಿ ಇಲ್‌ತಿಕಾಫ್ ಮಾಡಬಹುದು.

ಪ್ರವಾದಿ(ಸ) ಅವರ ಪತ್ನಿಯರ ಪೈಕಿ ಒಬ್ಬರು ಪ್ರವಾದಿ(ಸ) ಅವರ ಜತೆ ಇಲ್‌ತಿಕಾಫ್ ಮಾಡಿದರು. ಆಗ ಅವರಿಗೆ ಅನಾರೋಗ್ಯದ ಕಾರಣ ರಕ್ತಸ್ರಾವವಾಗುತ್ತಿತ್ತು.

[ವರದಿ: ಹ.ಆಯಿಶಾ(ರ) - ಬುಖಾರಿ, ಅಬೂದಾವೂದ್, ನಸಾಈ, ಇಬ್ನುಮಾಜಃ]